# ಕರ್ನಾಟಕ ಲೋಚನ

ಸಂಪುಟ ೧೦ ಜೂನ್ ೧೯೯೭ ಸಂಚಿಕೆ ೧

೨೯



## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು-೫೬೦ ೦೧೯

# 'ಕರ್ನಾಟಕ ಲೋಚನ'

## ಸಂಪಾದಕ ಮಂಡಲಿ



## ಲೇಖನಗಳು-ಟಿಪ್ಪಣಿಗಳು

ಸಂಶೋಧನಾತ್ಮಕ, ಪಾಂಡಿತ್ಯ-ವಿದ್ವತ್ ಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು-ಇವುಗಳ ಮೇಲಣ ವಿಮರ್ಶೆಗಳು ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ, ಇವುಗಳಿಗೆ ಸಂಬಂಧಿಸಿದ ಟೀಕೆ-ಟಿಪ್ಪಣಿಗಳು-ಇವುಗಳಿಗೆ 'ಕರ್ನಾಟಕ ಲೋಚನ' ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು ; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

## ಲೇಖನಗಳಿಗೆ ಆಹ್ವಾನ

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. ಲೋಚನದ ಗಾತ್ರ ಪರಿಮಿತವಾದ್ದರಿಂದ ಲೇಖನಗಳು ಅಚ್ಚಿನ 6-8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ, ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿ ಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ-ಲೇಖನಾಧಾರ ವಿವರಗಳನ್ನು (Bibiliography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ವಿನಂತಿ.

# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಎಂ. ವಿ. ಸೀತಾರಾಮಯ್ಯರಸ್ತೆ,
ಮಾಸ್ತಿನಗರ, (ಗವೀಪುರ ವಿಸ್ತರಣ), ಬೆಂಗಳೂರು-560 019.

ಸಂಪಾದಕರು : ವಿದ್ವಾನ್ ಟಿ. ಕೇಶವ ಭಟ್ಟ

ಸಹಾಯಕ ಸಂಪಾದಕರು : ಎನ್. ಎಸ್. ರಾಮಸ್ವಾಮಿ ಅಯ್ಯರ್

ಸಂಪುಟ ೧೦ ಜೂನ್ ೧೯೯೭ ಸಂಚಿಕೆ ೧

ಪ ರಿ ವಿ ಡಿ

# Karnataka Lochana

Half-Yearly Journal, Published by B. M. Sri Smaraka Prathisthana, Masthi Nagar, (Gavipuram Extension) Bangalore-560 019



Vol. X June 1997 No. 1

CONTENTS

# ಸಮಸ್ಯಾ ಪೂರಣ

[ವಿದ್ವತ್ಪತ್ರಿಕೆಯಾಗಿರುವ ಈ 'ಕರ್ನಾಟಕ ಲೋಚನ' ಸಂಪುಟ ೬, ಸಂಚಿಕೆ ೧ (ಜೂನ್ ೧೯೯೩)ಮೊದಲ್ಗೊಂಡು 'ಸಮಸ್ಯಾಪೂರಣ' ಎಂಬ ಅಂಕಣವನ್ನು ಪ್ರಾರಂಭಿಸಲಾಗಿದೆ. ಇದು ಕನ್ನಡದ ಅತಿಶಯ ಅಕ್ಷಣವೆನಿಸುವ ಪ್ರಾಸ-ಪಾದ-ಛಂದೋಬದ್ಧ ಪದ್ಯರಚನೆಗೆ ಸಜೀವತೆಯನ್ನು ನೀಡುವ ಉದ್ದೇಶವುಳ್ಳದು- ಪ್ರತಿ ಸಂಚಿಕೆಯಲ್ಲಿಯೂ ಅದರ ಮುಂದಿನ ಸಂಚಿಕೆಗಾಗಿ ಸಮಸ್ಯಾ ಪದ್ಯ ಪಾದವನ್ನು ಕೊಡಲಾಗುತ್ತಿದೆ. ಒಬ್ಬೊಬ್ಬರಿಂದ ಒಂದೊಂದು ಪದ್ಯವನ್ನು ಮಾತ್ರ ಸ್ವೀಕರಿಸಿ ಪ್ರಕಟಿಸಲಾಗುತ್ತದೆ. ಈ ಸಂಚಿಕೆಗಾಗಿ ಒಂದು ಕಂದ ಪದ್ಯದ ಪಾದವನ್ನು ಕೊಡಲಾಗಿದೆ.] ಅದು ಹೀಗಿದೆ-

'ನಿನಗೆನಸುಂ ಕರುಣಮಿಲ್ಲ ಮರವಾನಿಸನ್ಯೆ' (ಕವಿರಾಜಮಾರ್ಗ-೨-೮೩)

ಪ್ರಕಟನೆಗಾಗಿ ಬಂದ ಸಮಸ್ಯಾಪೂರಣ ಪದ್ಯಗಳಿವು—

1 ಇನಿಯಂ ಮದಿರಾಂಗನೆಯೊಡ
ನನುದಿನ ರಮಿಸುತ್ತ ಬಂದು ಬಡಿಯಲ್ ಸತಿ ತಾಂ
ತನು ಮನ ಹಿಂಸೆಗೆ ನೊಂದೆನೆ
ನಿನಗೆನಸುಂ ಕರುಣಮಿಲ್ಲ ಮರವಾನಿಸನ್ಯೆ

— ತಲೆಂಗಳ ರಾಮಕೃಷ್ಣ ಭಟ್ಟ, ವಿದ್ವಾನ್

2 ಕಿನಿಸಿಂ ಮಗನಂ ಕೋಲ್ಮುರಿ
ವಿನೆಗಂ ಬಡಿಬಡಿದು ಮಗ್ಗಿ ಕಲಿಯದೊಡುಕಾಸಂ
ನಿನಗೀಯೆನೆಂದು ಗದರುವೆ
ನಿನಗೆನಸುಂ ಕರುಣಮಿಲ್ಲ ಮರವಾನಿಸನ್ಯೆ

— ಟಿ. ಕೇಶವ ಭಟ್ಟ.

3 ವನಿತೆ ಶಕುಂತಳೆದುಷ್ಯಂ
ತನೊಳೆಂದಳ್ ವರಿಸಿಯೆನ್ನ ಮರೆತೈ ಬಂದಾಂ
ನೆನೆಪಿಸಲುಂ ಸಮ್ಮತಿಸದ
ನಿನಗೆನಸುಂ ಕರುಣಮಿಲ್ಲ ಮರವಾನಿಸನ್ಯೆ

ಕೆ. ಪಿ. ರಾಜಗೋಪಾಲ್

4 ತನಯಂ ಪ್ರಹ್ಲಾದಂ ಹರಿ
ಯನೆ ನೆನೆವನೆನುತ್ತೆ ಮುಳಿದು ಕೊಲಲುಂ ನಿನ್ನಾ
ಮನವೊಳಸುವನಿತು ಕ್ರೂರಮೆ ?
ನಿನಗೆನಸುಂ ಕರುಣಮಿಲ್ಲ ಮರವಾನಿಸನ್ನೆ

—ಗಮಕಿ, ಆರ್. ಶಂಕರ ನಾರಾಯಣ್

5 ನಿನಗಿದೊ ಮಣ್ಣ ಮಗಂಗಿಂ
ದಿನ ಜನಮಾನಸದ ಶಾಂತಿಮಾರ್ಗಂ ದೂರಂ
ಮನಮೋ ಕುಹಕಂ ಕ್ರೂರಂ
ನಿನಗೆನಸುಂ ಕರುಣಮಿಲ್ಲ ಮರವಾನಿಸನ್ನೆ

—ತಾಳ್ತಜೆ ಕೃಷ್ಣ ಭಟ್ಟ, ವಿದ್ವಾನ್

6 ನಿನದೆ ಧ್ಯಾನ ಹಗಲಿರುಳು
ಅನುದಿನ ನಿನ್ನಯ ವಿರಹವ ಸಹಿಸೆನು ಕಾಣಾ
ಮಾನಿನಿಯ ಮನೋವಲ್ಲಭ
ನಿನಗೆನಸುಂ ಕರುಣಮಿಲ್ಲ ಮರವಾನಿಸನ್ನೆ

—ಹೆಚ್. ಜಯಮ್ಮ

7 ಜನತಾ ಸತ್ತ್ರೆಯೊಳಿಲ್ಲಾ
ಜನರುಂ ಸತ್ತ್ರೆವು ಬರ್ದುಕೆವು ಎಂದೊಡದೇಂ ಬಿಡ
ದೆನಿತಂ 'ಪುಢಾರಿ' ಕಾಡುವೆ
ನಿನಗೆನಸುಂ ಕರುಣಮಿಲ್ಲ ಮರವಾನಿಸನ್ನೆ

—ಬಿ. ರಾಜಶೇಖರಪ್ಪ.

ಮುಂದಿನ ಸಂಚಿಕೆಗೆ ಸಮಸ್ಯಾ ಪಾದ—
'ಭಾವ ಶುದ್ಧಿಯ ಬಕುತಿ ಬೇಹುದು' (ಕುಮಾರ ವ್ಯಾಸ ಭಾರತ)

# ಮಹಾಕಾವ್ಯದ ಆಶಯಗಳು—ಅತಿಮಾನುಷತೆ *

—ಡಾ|| ವ್ಹಿ .ಜಿ. ಪೂಜಾರ

ಮಹಾಕಾವ್ಯಗಳು ಜಗತ್ತಿನ ಎಲ್ಲ ಭಾಷೆಗಳಲ್ಲೂ ರಚನೆಗೊಂಡಿವೆ. ಸಂಸ್ಕೃತ ಭಾಷೆಯಲ್ಲಿ ರಚನೆಗೊಂಡ 'ರಾಮಾಯಣ', 'ಮಹಾಭಾರತ'ಗಳು ಭಾರತೀಯ ಶ್ರೇಷ್ಠ ಮಹಾಕಾವ್ಯಗಳಾಗಿವೆ. ಇವು ಭಾರತೀಯ ಎಲ್ಲ ಭಾಷೆಗಳಲ್ಲಿ ಸೃಷ್ಟಿಗೊಂಡ ಮಹಾಕಾವ್ಯಗಳಿಗೆ ಒಂದಿಲ್ಲೊಂದು ವಿಧದಲ್ಲಿ ಪ್ರೇರಣೆಯನ್ನು ನೀಡಿವೆ. ಐತಿಹಾಸಿಕ ಹಾಗೂ ಪೌರಾಣಿಕ ಸಂಗತಿಗಳನ್ನು ಹಾಸುಹೊಕ್ಕಾಗಿ ಒಳಗೊಂಡಿರುವ ಇವು ಪಂಡಿತರಿಗೂ ಪಾಮರರಿಗೂ ಪ್ರಿಯವಾಗಿವೆ. ಇವು ಒಂದರ್ಥದಲ್ಲಿ ನಮ್ಮ ದೇಶದ ಸಾಂಸ್ಕೃತಿಕ ಪಳೆಯುಳಿಕೆಗಳೇ ಆಗಿವೆಯೆನ್ನಬಹುದು. ಇವುಗಳಲ್ಲಿ ನಮ್ಮ ಸಂಸ್ಕೃತಿಗೆ ಸ್ಪಂದಿಸುವ ಜೀವಗುಣ ಹಾಗೂ ಸಾಮಾನ್ಯ ಜನರನ್ನು ರಂಜಿಸಿ ಅವರನ್ನು ಮುದಗೊಳಿಸುವ ಅದ್ಭುತ , ಅತಿಮಾನುಷ ಸಂಗತಿಗಳು ವರ್ಣನೆಗೊಂಡುದನ್ನು ಕಾಣುವೆವು. "ಅತಿಮಾನುಷತೆಯು ಯುದ್ಧ, ಪ್ರಯಾಣ ಹಾಗೂ ಹೆಣ್ಣು-ಇವುಗಳಂತೆ ಮಹಾಕಾವ್ಯದ ಪ್ರಮುಖ ಆಶಯಗಳಲ್ಲೊಂದಾಗಿದೆ. ಈ ಆಶಯ ಭಾರತೀಯ ಮಹಾಕಾವ್ಯಗಳಲ್ಲಷ್ಟೇ ಬರದೆ ಪಾಶ್ಚಾತ್ಯ ಮಹಾಕಾವ್ಯಗಳಾದ 'ಇಲಿಯಡ್' 'ಓಡಿಸ್ಸಿ', 'ಡಿ ವೈನ್ ಕಾಮೆಡಿ' ಪ್ಯಾರಾಡೈಸ್ ಲಾಸ್ಟ' 'ಪ್ಯಾರಾಡೈಸ್ ರೀಗೇನ್ಡ' 'ಗಿಲ್‌ಗಮೇಶ್' 'ಕಾಲೇವಾಲಾ'. ಮುಂತಾದುವುಗಳಲ್ಲಿ ಬಂದುದನ್ನು ಕಾಣುವೆವು. ಬೈಬಲ್, ಕುರಾನ್‌ಗಳಂಥ ಧಾರ್ಮಿಕ ಗ್ರಂಥಗಳಲ್ಲೂ ಇವೆ.

ಅತಿಮಾನುಷತೆಯೆಂದರೆ ಮಾನವಶಕ್ತಿಯಿಂದ ಇಲ್ಲವೆ-ಮನುಷ್ಯ-ಪ್ರಯತ್ನದಿಂದ ಆಗದ, ದೈವೀಶಕ್ತಿಯಿಂದ ಇಲ್ಲವೆ ಅಲೌಕಿಕ ಶಕ್ತಿಯಿಂದ ಆಗುವ ಕಾರ್ಯ, ಅದ್ಭುತ ಘಟನೆ. ಇಂಥ ಕಾರ್ಯ ಅಥವಾ ಘಟನೆಗಳಿಗೆ ಪವಾಡಗಳೆಂದೂ ಕರೆಯಲಾಗುವುದು. ಇವುಗಳನ್ನು ಯಾವುದೇ ನೈಸರ್ಗಿಕ ಕೃತಿಗಳಿಂದ ಸಾಧಿಸಲಾಗದು.

* ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಇವುಗಳ ಸಂಯುಕ್ತಾಶ್ರಯದಲ್ಲಿ ೧೯೯೫ರ ಸೆಪ್ಟಂಬರ ೯ ಹಾಗೂ ೧೦ ರಂದು ಕಲಬುರ್ಗಿಯಲ್ಲಿ ನಡೆದ 'ಕನ್ನಡ ಮಹಾಕಾವ್ಯ : ಅಧ್ಯಯನದ ನೆಲೆಗಳು' ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.

ಮಾನವೀಯ ಶಕ್ತಿಗೆ ಅಸಾಧ್ಯವೆನಿಸುವ, ಲೋಕ ವಿಲಕ್ಷಣವಾದ ಕಾರ್ಯ--ಕಾರಣ ವಿಲ್ಲದೆ ನಿಸರ್ಗ ನಿಯಮದ ವಿರುದ್ಧ ಘಟಿಸುವ ಕಾರ್ಯ ಇಲ್ಲವೆ ಸಂಗತಿಗಳೇ ಅತಿ-ಮಾನುಷ ಕಾರ್ಯಗಳಾಗಿವೆ.

ಅತಿಮಾನುಷ ಸಂಗತಿಗಳನ್ನು ಒಳಗೊಳ್ಳದ ಮಹಾಕಾವ್ಯಗಳೇ ಜಗತ್ತಿನಲ್ಲಿ ವಿರಳ, ಇಲ್ಲವೆಂದರೂ ತಪ್ಪಾಗದು. ಪ್ರಾಚೀನ ಕಾಲದಿಂದಲೂ ಜಗತ್ತಿನ ಎಲ್ಲ ಮಹಾಕಾವ್ಯಗಳಲ್ಲೂ ಅತಿಮಾನುಷ ಸಂಗತಿಗಳು ವರ್ಣನೆಗೊಳ್ಳುತ್ತ ಬಂದುದನ್ನು ಕಾಣುವೆವು. ಇದಕ್ಕೆ ಭಾರತೀಯ ಮಹಾಕಾವ್ಯಗಳೂ ಹೊರತಲ್ಲ. ಭಾರತೀಯರು ಇತಿಹಾಸವನ್ನು ಪುರಾಣವಾಗಿಸುವಲ್ಲಿ ಪ್ರವೀಣರು. ಪುರಾಣಗಳೆಂದಾಗ ಸಾಮಾನ್ಯ ಜನರಿಗೆ ರುಚಿಸುವ ಕಾಲ್ಪನಿಕ ಸಂಗತಿಗಳು, ಅತಿಮಾನುಷ–ಪ್ರಸಂಗಗಳು ಸೇರಿ ಕೊಳ್ಳುವುದು ಸಹಜ. ಮಹಾಕಾವ್ಯಗಳಿಗೆ ವಸ್ತು ಸಾಮಾನ್ಯವಾಗಿ ಇತಿಹಾಸದ ಘಟನಾವಳಿಗಳೇ ಆಗಿದ್ದರೂ, ಅವುಗಳ ನಿರೂಪಣೆಯಲ್ಲಿ ಪುರಾಣ ಹಣಿಕಿಕ್ಕಿರುವು ದನ್ನು ಕಾಣುವೆವು. ಇತಿಹಾಸ ತನಗೆ ತಾನೇ ಹುಟ್ಟಿದ್ದು, ಪುರಾಣ ಒಂದು ಜನ ಸಮುದಾಯ ಕಟ್ಟಿದ್ದು. ಇತಿಹಾಸದಲ್ಲಿ ವಾಸ್ತವಿಕತೆಯಿದ್ದರೆ, ಪುರಾಣದಲ್ಲಿ ಕಲ್ಪನೆ ಇರುತ್ತದೆ. ಜಗತ್ತಿನ ಎಲ್ಲ ಮಹಾ ಕಾವ್ಯಗಳೂ ಸಾಮಾನ್ಯವಾಗಿ ಇತಿಹಾಸ–ಪುರಾಣ ಗಳ ಕಲಸು–ಮೇಲೋಗರಗಳೇ ಆಗಿವೆ.

ಮಹಾಕಾವ್ಯದ ಕಥೆ ಕೇವಲ ಮರ್ತ್ಯಲೋಕಕ್ಕಷ್ಟೇ ಸಂಬಂಧಿಸಿದುದಾಗಿರದೆ ದೇವಲೋಕಕ್ಕೂ ಅದರ ವ್ಯಾಪ್ತಿ ಚಾಚಿಕೊಂಡಿರುತ್ತದೆ. ದೇವ–ದಾನವ–ಮಾನವ ರನ್ನೆಲ್ಲ ಒಂದೇ ವೇದಿಕೆಯ ಮೇಲೆ ತರುವ, ಅವರ ವ್ಯಕ್ತಿತ್ವವನ್ನು ರಂಗು–ರಂಗಾಗಿಸಿ ವಿರಾಡ್ರೂಪಗೊಳಿಸಿ ಚಿತ್ರಿಸುವ, ಅಣುವಿನಲ್ಲಿ ಅದ್ರಿಯನ್ನು ಕಾಣಿಸುವ, ಭವ್ಯತೆಯನ್ನು ಕಲ್ಪಿಸಿ ಭೂಮದೃಷ್ಟಿಯನ್ನು ತರುವ ಕ್ರಿಯೆ ಎಲ್ಲ ಮಹಾಕಾವ್ಯಗಳಲ್ಲೂ ನಡೆಯುತ್ತ ಬಂದಿದೆ. ಪ್ರಾಚೀನ ಮಹಾಕಾವ್ಯಗಳಲ್ಲಿ ಈ ಕ್ರಿಯೆ ಹೆಚ್ಚಾಗಿ ನಡೆದರೆ, ಆಧುನಿಕ ಮಹಾಕಾವ್ಯಗಳಲ್ಲಿ ವಿಜ್ಞಾನ ಬೆಳವಣಿಗೆ ಕಾರಣವೊ ಏನೋ–ಇದು ಅಷ್ಟಾಗಿ ನಡೆದಿಲ್ಲ. ಅತಿಮಾನುಷ ಪ್ರಸಂಗಗಳು ಕಥೆಗಳ ರೂಪದಲ್ಲಿ ಮಹಾ ಕಾವ್ಯಗಳಲ್ಲಿ ವರ್ಣನೆಗೊಳ್ಳಲು ಬಹುಮಟ್ಟಿಗೆ ಸಾಮಾನ್ಯ ಜನರೇ ಕಾರಣರು. ಅವರು ಇಂಥವನ್ನು ಹೆಚ್ಚಾಗಿ ಬಯಸುವರು. ಮಹಾಕಾವ್ಯಗಳಲ್ಲಿ ಅದ್ಭುತ, ಅತಿಮಾನುಷ ಸಂಗತಿಗಳು ಇದ್ದರೇನೇ ಅವರಿಗೆ ಮಹಾಪುರುಷರ ಚರಿತ್ರೆ, ಧರ್ಮತತ್ವಗಳು ಪರಿಣಾಮಕಾರಿಯಾಗಿ ತಿಳಿಯು ವವು. ಬಹುಶಃ ಇದನ್ನು ಗಮನಿಸಿಯೇ ಸಿಸಿರೋ ಎಂಬ ತತ್ವಜ್ಞಾನಿ 'Miracle stories are necessary for the piety of ignorant folk'[1] ಎಂದು ನುಡಿದಿರುವಂತಿದೆ. ದೈವೀ ದೃಷ್ಟಿಯುಳ್ಳ ಭಾರತೀಯರಂತೂ ಅತಿಮಾನುಷತೆ ಮಹಾಕಾವ್ಯಗಳಲ್ಲಿ ಬರುವುದನ್ನು ಅತಿಯಾಗಿ ಬಯಸುವರು. ಅದಿಲ್ಲದಿದ್ದಲ್ಲಿ ಅವರಿಗೆ ಆ

1. Encyclopaedia Britanica, Vol-12.

ಕಾವ್ಯ ರುಚಿಸದು. ಅತಿಮಾನುಷ ಶಕ್ತಿಯುಳ್ಳವನೇ ಮಹಾಕಾವ್ಯದ ನಾಯಕನೆಂದು ಅವರ ದೃಢನಂಬುಗೆ. ಈ ನಂಬುಗೆಗೆ ಇಂಬಾಗುವ ರೀತಿಯಲ್ಲಿ ಬಹುತೇಕ ಭಾರತೀಯ ಕವಿಗಳು ನಡೆದು ಕೊಂಡುದುಂಟು.

ಮಹಾಕಾವ್ಯದ ನಾಯಕ ಧೀರ, ವೀರನಾದಂತೆ ಅತಿಮಾನುಷ ಶಕ್ತಿಯುಳ್ಳ ಆಧ್ಯಾತ್ಮ ಜೀವಿಯೂ, ಧರ್ಮವೀರನೂ ಆಗಿರುವುದುಂಟು. ಆತ "ಕುಲ ಪರ್ವತಗಳನ್ನು ನಡುಗಿಸುತ್ತಾನೆ. ಕಡಲನ್ನೇ ಕಲಕುತ್ತಾನೆ. ತನ್ನೊಂದು ಬಾಣದ ಸಂಧಾನದಿಂದ ದಿಕ್ಕುಗಳನ್ನು ಸುಡುತ್ತಾನೆ. ಯಾರ ಕಣ್ಣಿಗೂ ಕಾಣಿಸದ ರೂಪ ಪರಾವರ್ತನ ವಿದ್ಯೆಯನ್ನು ಸಾಧಿಸಿ ತೋರಿಸುತ್ತಾನೆ. ಆಂಜನೇಯನ ಸಾಗರೋಲ್ಲಂಘನದ ಸಂದರ್ಭ-ವನ್ನಾಗಲೀ, ಶ್ರೀ ಕೃಷ್ಣನ ವಿಶ್ವರೂಪ ಸನ್ನಿವೇಶವನ್ನಾಗಲೀ ಗಮನಿಸಬಹುದು. ಮಹಾಕಾವ್ಯದ ನಾಯಕನಿಗೆ ಅಪೌರುಷೇಯ ಶಕ್ತಿಗಳ ಮೇಲೆ ಇರುವ ಪ್ರಭುತ್ವದಿಂದಾಗಿ ಅಲೌಕಿಕವಾದ ಅಘಟಿತ ಘಟನೆಗಳು ಅವನಿಂದ ನಡೆದಂತೆ ಚಿತ್ರಿತವಾಗುತ್ತದೆ. 2 ರಾಮ, ಹನುಮಂತ, ಕೃಷ್ಣ, ಯೇಸು, ಬುದ್ಧ, ಮಹಾವೀರ, ಪೈಗಂಬರ, ಬಸವಣ್ಣ, ಸಿದ್ಧರಾಮ, ಅಲ್ಲಮ ಪ್ರಭು, ಕಬೀರ, ಝುರತುಷ್ಟ್ರ ಮುಂತಾದ ಧಾರ್ಮಿಕ ಮಹಾಪುರುಷರು,ವಿಭೂತಿಗಳು ಮಹಾಕಾವ್ಯಗಳಲ್ಲಿ ಅತಿಮಾನುಷ ಶಕ್ತಿಯುಳ್ಳವರೆಂದು ಚಿತ್ರಣಗೊಂಡುದರಿಂದಲೇ ಇವರ ಚರಿತ್ರೆಗೆ ಸಾಮಾನ್ಯಜನರ ದೃಷ್ಟಿಯಲ್ಲಿ ಅಷ್ಟಾಗಿ ಬೆಲೆ ಬಂದಿದೆ. ಸಾಮಾನ್ಯ ಜನರು ಇವರನ್ನು ಅಸಾಮಾನ್ಯ ದೈವೀಪುರುಷರೆಂದೂ, ಅವತಾರಿಗಳೆಂದೂ ಕಂಡಿದ್ದಾರೆ. ಐತಿಹಾಸಿಕ ವ್ಯಕ್ತಿಗಳೇ ಆದ ಇವರು ಮಹಾಕಾವ್ಯಗಳಲ್ಲಿ ಪುರಾಣಪುರುಷರಾಗಿ ಚಿತ್ರಣಗೊಂಡಿದ್ದಾರೆ ; ಕೆಲವರಂತೂ ಇವರನ್ನು ದೇವರೆಂದೇ ಭಾವಿಸಿಕೊಂಡಿದ್ದಾರೆ. ಈ ಭಾವನೆ, ನಂಬಿಕೆ ಇಂದು ನಿನ್ನೆಯದಲ್ಲ. ಇದರ ಮೂಲವನ್ನು ಹುಡುಕುತ್ತ ನಾವು ಹಿಂದೆ ಹಿಂದೆ ಹೋದದ್ದಾದರೆ ಆದಿಮ ಕಾಲದ ಮಾನವ ಸಮಾಜದ ವರೆಗೂ ಪಯಣಿಸಬೇಕಾಗುತ್ತದೆ. ಆದಿಮ ಕಾಲದ ಸಮಾಜದಲ್ಲಿ ಶೆಮನ್ ಎಂಬೊಬ್ಬ ವ್ಯಕ್ತಿ ಇರುತ್ತಿದ್ದ. ಈತ ಒಂದೆಡೆ ವೈದ್ಯನಾಗಿ, ಇನ್ನೊಂದೆಡೆ ಸಮಾಜದ ಮುಖಂಡನಾಗಿ, ಮತ್ತೊಂದೆಡೆ ಮಾಂತ್ರಿಕ, ಹಾಗೂ ದೈವೀಕಾರ್ಯಗಳನ್ನು ನಡೆಸುವವನಾಗಿ ಕಾರ್ಯ ನಿರ್ವಹಿಸುತ್ತಿದ್ದ. ಈತನನ್ನು ಸಾಮಾನ್ಯ ಜನರು ಅಸಾಮಾನ್ಯ ವ್ಯಕ್ತಿ, ಅತಿಮಾನುಷ ಶಕ್ತಿಯುಳ್ಳವನೆಂದು ಭಾವಿಸಿ ಆತನಲ್ಲಿ ಭಯ, ಭಕ್ತಿ ಇಡುತ್ತ ಬಂದರು. ಈ ಭಾವನೆಯೇ ಕಾಲಕ್ರಮದಲ್ಲಿ ಬಲಿತು ಬೆಳೆಯುತ್ತ ಬಂದುದರ ಪ್ರಯುಕ್ತ ಜಗತ್ತಿನ ಎಲ್ಲ ಮಹಾಕಾವ್ಯಗಳಲ್ಲೂ ನಾಯಕ ಪಾತ್ರ ಅತಿಮಾನುಷ ಶಕ್ತಿಯುಳ್ಳುದಾಗಿ ಚಿತ್ರಣಗೊಳ್ಳುತ್ತ ಬಂದಂತಿದೆ. ಇಲ್ಲಿ ಅಂತಹ ಕೆಲವು ಉದಾಹರಣೆಗಳನ್ನು ಭಾರತೀಯ ಹಾಗೂ ಪಾಶ್ಚಾತ್ಯ ಮಹಾಕಾವ್ಯಗಳಿಂದ ಆಯ್ದು ಕೊಡಬಹುದು : ಹನುಮಂತ ಸಮುದ್ರೋಲ್ಲಂಘನ ಮಾಡಿದ, ಸೀತೆ ಅಗ್ನಿ

2. ಶಿವರುದ್ರಪ್ಪ. ಜಿ. ಎಸ್ : ಮಹಾಕಾವ್ಯ ಸ್ವರೂಪ, ಪುಟ : 92,

ಪ್ರವೇಶ ಮಾಡಿದಳು, ಹನುಮಂತ ಸಂಜೀವಿನಿ ಕಡ್ಡಿ ತರ ಹೋಗಿ ಬೆಟ್ಟವನ್ನೇ ಎತ್ತಿ ತಂದ, ಕಪಿಸೈನ್ಯ ಸಮುದ್ರಕ್ಕೆ ಸೇತುವೆ ಕಟ್ಟಿತು, ಶ್ರೀ ಕೃಷ್ಣನು-ದ್ರೌಪದಿಯ ವಸ್ತ್ರಾಪಹರಣ ಪ್ರಸಂಗದಲ್ಲಿ ಆಕೆಯುಟ್ಟ ವಸ್ತ್ರ ಅಕ್ಷಯವಾಗುವಂತೆ ಮಾಡಿದ, ದ್ರೌಪದಿಯು ಅಕ್ಷಯ ಪಾತ್ರೆಯಲ್ಲಿ ಉಳಿದ ಒಂದಗುಳು ಅನ್ನದಿಂದ ಸಹಸ್ರಾರು ದೂರ್ವಾಸ ಶಿಷ್ಯರಿಗೆ ಉಣಲಿಕ್ಕಿದಳು, ಭೀಮ ಬಕಾಸುರನಿಗೆಂದು ಸಿದ್ಧಪಡಿಸಿದ ಬಂಡಿ ಅನ್ನವನ್ನು ಉಂಡ, ಶ್ರೀ ಶಂಕರಾಚಾರ್ಯರು ಬಡವಿಯೊಬ್ಬಳ ಮನೆಯಲ್ಲಿ ಬಂಗಾರದ ನೆಲ್ಲಿಕಾಯಿಯ ಮಳೆ ಸುರಿಸಿದರು, ಪರಕಾಯ ಪ್ರವೇಶ ಮಾಡಿದರು, ಏಸೂವಿಗೆ ಸಮುದ್ರ ದಾರಿ ಬಿಟ್ಟಿತು, ಏಸುವು ಕುರುಡರಿಗೆ ಕಣ್ಣುಕೊಟ್ಟ, ಮುಳುಗುವ ನಾವೆಯನ್ನು ತಡೆದ, ಬಸವಣ್ಣ ಬದನೆಕಾಯಿಲಿಂಗ ಮಾಡಿದ, ಕಣ್ಣಿಲ್ಲದವರಿಗೆ ಕಣ್ಣು, ಕಾಲಿಲ್ಲದವರಿಗೆ ಕಾಲು ಕೊಟ್ಟ, ಡಾಂಟೆಯು 'ಡಿವೈನ್ ಕಾಮೆಡಿ'ಯಲ್ಲಿ ವರ್ಜಿಲ್‌ನೊಡನೆ ಸ್ವರ್ಗ-ಪಾತಾಳ ಲೋಕಗಳನ್ನು ಸಂಚರಿಸಿದ, ಮಿಲ್ಟನ್‌ನ ಪ್ಯಾರಾಡೈಜ್ ಲಾಸ್ಟದಲ್ಲಿ ಮಾನವ-ದೇವರ ಸಂಬಂಧವೇರ್ಪಡುವ, ಸೇಟನ್ನನು ಮಲಗಿ ನಿದ್ರಿಸುತ್ತಿದ್ದ ಹಾವಿನ ಶರೀರದಲ್ಲಿ ಪ್ರವೇಶಿಸುವ ಸಂಗತಿಯಿದೆ. 'ಕಾಲೇವಾಲಾ'ದಲ್ಲಿ ಮಹಾಜ್ಞಾನಿ ವೈನಾಮ್ಹೊಯ್ನಿನ್‌ನು ಅಲೌಕಿಕ ರೀತಿಯಿಂದ ಜನಿಸಿದ, ಸಿದ್ಧರಾಮ ಪ್ರತಿನಿತ್ಯ ಸ್ವರ್ಗಕ್ಕೆ ಹೋಗಿ ಬರುತ್ತಿದ್ದ, ಅಲ್ಲಮ ಪ್ರಭುವು ತೊಂಬತ್ತಾರು ಜಂಗಮರಿಗೆ ಮಾಡಿದ ಅಡಿಗೆಯನ್ನು ತಾನೊಬ್ಬನೇ ಉಂಡ- ಇಂತಹ ಒಂದೇ ಎರಡೇ ? ಅತಿಮಾನುಷ ಪ್ರಸಂಗಗಳು ಮಹಾಕಾವ್ಯದ ನಾಯಕರುಗಳ ಚರಿತ್ರೆಗಳಲ್ಲಿ ಹಾಸುಹೊಕ್ಕಾಗಿ ಬೆರೆತು ಚಿತ್ರಿತವಾಗಿವೆ.

ಹೀಗೆ ಮಹಾಕಾವ್ಯಗಳಲ್ಲಿ ಕಿಕ್ಕಿರಿದು ವರ್ಣನೆಗೊಂಡ ಇಂಥ ಅತಿಮಾನುಷ ಪ್ರಸಂಗಗಳನ್ನು ಮೆಚ್ಚಿಕೊಳ್ಳುವವರೂ ಇದ್ದಾರೆ. ಅವಾಸ್ತವವಾದುವೆಂದು ಹೀಗಳೆಯುವವರೂ ಇದ್ದಾರೆ. ಮೆಚ್ಚಿಕೊಳ್ಳುವವರು-ಇಂಥ ಪ್ರಸಂಗಗಳು ಜನಸಾಮಾನ್ಯರ ಮನಸ್ಸನ್ನು ಮುದಗೊಳಿಸಿ ಅವರನ್ನು ರಂಜಿಸುವವು. ಅದ್ಭುತ ಅಲೌಕಿಕ ಸಂಗತಿಗಳು ಅವರಲ್ಲಿ ಒಂದು ಬಗೆಯ ಭೂಮದೃಷ್ಟಿಯನ್ನು ತಂದು ಕೊಡುತ್ತವೆಯೆನ್ನುವರು. ಹೀಗಳೆಯುವವರು ಇಂಥ, ಅವಾಸ್ತವ, ಅವೈಜ್ಞಾನಿಕ, ಕಟ್ಟುಕಥೆಗಳಿಂದೇನು ಪ್ರಯೋಜನ ? ಎನ್ನುವರು. ಇಬ್ಬರ ಅಭಿಪ್ರಾಯಗಳನ್ನೂ ಇಲ್ಲಿ ಸಂಪೂರ್ಣವಾಗಿ ಒಪ್ಪಿಕೊಳ್ಳಲಿಕ್ಕೆ ಆಗದು. ಇಬ್ಬರ ಅಭಿಪ್ರಾಯಗಳ ನಡುವೆ ಎಲ್ಲೋ ಸತ್ಯ ಅಡಗಿರುವಂತಿದೆ. ಮಾನವ ಕೇವಲ ಬುದ್ಧಿಜೀವಿಯಲ್ಲ, ಭಾವನಾಜೀವಿಯೂ ಆಗಿದ್ದಾನೆ. ಕೇವಲ ಬೌದ್ಧಿಕತೆ ಶುಷ್ಕವೆನ್ನಿಸುವುದು. ಕೇವಲ ಭಾವುಕತೆ ಕಲ್ಪನೆಯನ್ನು, ಭ್ರಮೆಯನ್ನು ಹುಟ್ಟಿಸುವುದು. ಎರಡೂ ಗುಣಗಳು ಮಾನವನಲ್ಲಿ ಸಮ-ಸಮನಾಗಿ ಬೆರೆತಾಗಲೇ ಆತನ ವ್ಯಕ್ತಿತ್ವಕ್ಕೆ ಜೋಕೆ-ತೂಕಗಳು ಪ್ರಾಪ್ತವಾಗುವವು. ಮಹಾ ಕವಿಗಳೂ ಇದಕ್ಕೆ ಹೊರತಲ್ಲ. ಬುದ್ಧಿಜೀವಿಗಳಾದ ಅವರು ಭಾವನಾಶೀಲತೆಯನ್ನೂ

ಮೈಗೂಡಿಸಿಕೊಂಡು ತಂತಮ್ಮ ಮಹಾಕಾವ್ಯಗಳಲ್ಲಿ ಅತಿಮಾನುಷತೆಯನ್ನು ವರ್ಣಿಸಿದ್ದುಂಟು.

ಬುದ್ಧಿಗೂ ತರ್ಕಕ್ಕೂ ತಾಳೆ ಹೊಂದುವ ಸಂಗತಿಗಳನ್ನಷ್ಟೇ ಸತ್ಯವೆಂದೊಪ್ಪಿಕೊಳ್ಳುವ ವಿಜ್ಞಾನವಿನ್ನೂ ಶೈಶವಾವಸ್ಥೆಯಲ್ಲಿದೆಯೆನಿಸುತ್ತದೆ. ಅದಕ್ಕೂ ನಿಲುಕದ ಇನ್ನೆಷ್ಟೋ ಗೂಢವಾದ ಸಂಗತಿಗಳು ಪ್ರಪಂಚದಲ್ಲಿವೆ. ಅತಿಮಾನುಷ ಸಂಗತಿಗಳನ್ನು ಆದಿನ್ನೂ ಒರೆಗೆ ಹಚ್ಚಿ ಪರೀಕ್ಷಿಸಬೇಕಾಗಿದೆ. ಹೀಗಿರುವಾಗ ಮಹಾಕಾವ್ಯದಲ್ಲಿನ ಅತಿಮಾನುಷತೆಯನ್ನು ನಾವು ಸಾರಾಸಗಟಾಗಿ ನಿರರ್ಥಕವಾದಂಥದೆಂದು ತಳ್ಳಿಹಾಕುವುದು ಸರಿಯಲ್ಲ. ತಳ್ಳಿಹಾಕಿದರೆ ಅದೆಷ್ಟೋ ಮಹಾಕಾವ್ಯಗಳಲ್ಲಿನ ಧಾರ್ಮಿಕ ಮಹಾಪುರುಷರ ಚರಿತ್ರೆ ನಿಸ್ತೇಜವಾಗುವುದು. ಜನತೆಯ ಭಾವನೆಯನ್ನೇ ಇದರಿಂದ ಕಲಕಿದಂತಾಗಿ ಮಹಾಕಾವ್ಯ ತನ್ನಮಹತ್ವವನ್ನು ಕಳೆದುಕೊಳ್ಳಬಹುದು. ಆದ್ದರಿಂದ ಅತಿಮಾನುಷ ಪ್ರಸಂಗಗಳನ್ನು ಪೂರ್ಣ ಕೈಬಿಡುವುದಾಗಲೀ, ಅವನ್ನು ವಾಚ್ಯಾರ್ಥದಲ್ಲಿ ಪರಿಭಾವಿಸಿ ಸ್ವೀಕರಿಸುವುದಾಗಲೀ ಮಾಡದೆ ಅವುಗಳ ಹಿಂದೆ ಅಡಗಿರುವ ಸಾಂಕೇತಿಕತೆಯನ್ನು ಭಾವಸತ್ಯವನ್ನು, ಆಶಯವನ್ನು ಅರ್ಥೈಸಿಕೊಳ್ಳಬೇಕು. ಅತಿಮಾನುಷ ಸಂಗತಿ ಇಲ್ಲವೆ ಪವಾಡಗಳು ಸತ್ಯದ ಮುಖಕ್ಕೆ ಮುಚ್ಚಿದ ಸುವರ್ಣದ ಮುಚ್ಚಳಗಳಿದ್ದಂತೆ. ಆ ಮುಚ್ಚಳವನ್ನು ಓರೆ ಮಾಡಿದಾಗ ಸತ್ಯ ಸಾಕ್ಷಾತ್ಕಾರವಾಗುವಂತೆ ವಸ್ತುಸ್ಥಿತಿ-ವಾಸ್ತವ ಚಿತ್ರ ಕಣ್ಗೆ ಕಾಣಿಸುವುದು. ಈ ಸೂತ್ರವನ್ನು ಮಹಾಕಾವ್ಯಗಳಲ್ಲಿನ ಅತಿಮಾನುಷ ಪ್ರಸಂಗಗಳಿಗೆ ಅನ್ವಯಿಸಿದಾಗ ಅವುಗಳ ಹಿಂದೆ ಅಡಕಗೊಂಡಿರುವ ಆ ಶ ಯ ಅರ್ಥವಾಗುವುದು.

ಭಾರತೀಯ ಹಾಗೂ ಪಾಶ್ಚಾತ್ಯ ಮಹಾಕಾವ್ಯಗಳಲ್ಲಿ ಬಂದಂತೆ ಅತಿಮಾನುಷತೆ ಕನ್ನಡ ಮಹಾಕಾವ್ಯಗಳಲ್ಲೂ ಬಂದಿದೆ. ಅದರಲ್ಲಿ ವೀರಶೈವ ಮಹಾಕಾವ್ಯಗಳಲ್ಲಿ ಯಂತೂ ಅತಿಮಾನುಷ ಪ್ರಸಂಗಗಳು-ಪವಾಡಗಳು ಹೇರಳವಾಗಿ ವರ್ಣನೆಗೊಂಡಿವೆ. ಐತಿಹಾಸಿಕ ವ್ಯಕ್ತಿಗಳಾದ ರೇವಣಸಿದ್ಧ, ಅಲ್ಲಮ ಪ್ರಭು, ಸಿದ್ಧರಾಮ, ಬಸವಣ್ಣ, ಹಡಪದಪ್ಪಣ್ಣ, ಚೆನ್ನಬಸವಣ್ಣ ಮುಂತಾದ ಶಿವಶರಣರು ಪೌರಾಣಿಕ ಪುರುಷರಾಗಿ, ಅಲೌಕಿಕ ಅತಿಮಾನುಷ ಶಕ್ತಿಯುಳ್ಳವರಾಗಿ ಇವುಗಳಲ್ಲಿ ಚಿತ್ರಣಗೊಂಡಿದ್ದಾರೆ, ಭಾರತೀಯ ಮಹಾಕಾವ್ಯಗಳಲ್ಲಿ ನಾಯಕನ ವ್ಯಕ್ತಿತ್ವಕ್ಕೆ ಮೆರುಗು ತರಲು, ಆತನ ಅದ್ಭುತ ಶಕ್ತಿಯನ್ನು ಪ್ರದರ್ಶಿಸಲು ಕವಿಗಳು ಅತಿಮಾನುಷ ಪ್ರಸಂಗಗಳನ್ನು ಚಿತ್ರಿಸಿದರೆ, ಇಲ್ಲಿ ಶರಣರ ಅಲೌಕಿಕ ಜನನ, ಲೋಕಕಲ್ಯಾಣ ದೃಷ್ಟಿ, ಧರ್ಮತತ್ವಗಳ ಪ್ರಸಾರ, ಅನ್ಯಧಾರ್ಮಿಕ ಮಹಾ ಪುರುಷರಂತೆ ಶರಣರೂ ಮಹಿಮಾಶಾಲಿಗಳೆಂದು ತೋರಿಸುವುದು-ಈ ಎಲ್ಲ ಉದ್ದೇಶಗಳನ್ನು ಇರಿಸಿಕೊಂಡು ಕವಿಗಳು ವರ್ಣಿಸಿದ್ದುಂಟು. ಜೈನ ಹಾಗೂ ಬ್ರಾಹ್ಮಣ ಮತದ ಮಹಾಕಾವ್ಯಗಳಲ್ಲಿ ಅತಿಮಾನುಷ ಪ್ರಸಂಗಗಳು ಅಷ್ಟಾಗಿ ವರ್ಣನೆಗೊಂಡಿಲ್ಲ ಬಹುಶಃ ಇದಕ್ಕೆ ಕಾರಣ ಅವರ ಧರ್ಮಗಳು ಆಗಲೇ

ಜೆಳೆದು ಪ್ರವರ್ಧಮಾನಕ್ಕೆ ಬಂದಿದ್ದುವು. ವೀರಶೈವ ಧರ್ಮ ಮಾತ್ರ ಆಗ ಬೆಳ-ವಣಿಗೆಯ ಹಂತದಲ್ಲಿದ್ದು, ಆ ಧರ್ಮಗಳಿಗೆ ಹೆಗಲೆಣೆಯಾಗಿ ನಿಂತುಕೊಳ್ಳಲು ಯತ್ನಿಸು ತ್ತಿತ್ತು. ವೀರಶೈವ ಧರ್ಮವನ್ನು ಸ್ಥಿರಗೊಳಿಸಿ ಸರ್ವತ್ರವಾಗಿ ಪ್ರಚಾರಗೊಳಿಸಬೇಕೆಂಬ ಉದ್ದೇಶವಿರಿಸಿಕೊಂಡು ವೀರಶೈವ ಕವಿಗಳು ಇವನ್ನು ವರ್ಣಿಸಿರುವಂತಿದೆ. ಪವಾಡ ಗಳಂತಹ ಅತಿಮಾನುಷ ಸಂಗತಿಗಳ ವರ್ಣನೆಯಿಂದ ಬಸವಾದಿ ಶರಣರ ವ್ಯಕ್ತಿತ್ವಕ್ಕೆ ಮೆರುಗು ಬರುತ್ತದೆ. ಅವರು ದೊಡ್ಡವರಾಗುತ್ತಾರೆಂದು ಬಹುಸಂಖ್ಯೆಯ ವೀರಶೈವ ಕವಿಗಳು ಭಾವಿಸಿರುವಂತಿದೆ. ಆದರೆ ವಸ್ತುಸ್ಥಿತಿ ಬೇರೆಯೇ ಇದೆ. ಇವುಗಳಿಂದೇನೂ ಶರಣರು ದೊಡ್ಡವರಾಗಲಿಲ್ಲ. ಅವರು ತಮ್ಮ ಸಹಜವಾದ, ವಾಸ್ತವವಾದ ಬದುಕಿ ನಿಂದ ಶ್ರೇಷ್ಠರೆನ್ನಿಸಿಕೊಂಡರು. ಇದೇನೇ ಇರಲಿ. ಜನಸಾಮಾನ್ಯರಿಗೆ ಶರಣರ ಚರಿತ್ರೆಯನ್ನು ಪರಿಣಾಮಕಾರಿಯಾಗಿ ತಿಳಿಸಲು ಅಂದು ಕವಿಗಳಿಗೆ ಅತಿಮಾನುಷ ಪ್ರಸಂಗಗಳು ಅವಶ್ಯವೆನ್ನಿಸಿದಂತಿದೆ.

ಅವುಗಳನ್ನಿಲ್ಲಿ ನೋಡಬಹುದು ; ೧) ಶರಣರು ಅಲೌಕಿಕ ರೀತಿಯಿಂದ ಜನಿಸಿದ ಅತಿಮಾನುಷರು, ಅವತಾರಿಗಳು, ಎಂದೆಲ್ಲ ಕವಿಗಳು ವರ್ಣಿಸಿದ್ದುಂಟು. ಬಸವಣ್ಣನ ತಾಯಿ ನಂದೀವ್ರತವಿಡಿದು, ನಂದೀಮುಖದಿಂದ ಪ್ರಸಾದ ಪಡೆದು ಸ್ವೀಕರಿಸಿದ ನಿಮಿತ್ತ ಆತನಿಗೆ ಜನ್ಮ ನೀಡಿದಳಂತೆ.[3] ರೇವಣಸಿದ್ಧೇಶ್ವರ ದೇವಾಲಯದ ಮಹಾಲಿಂಗವೊಂದರಿಂದ ಉದ್ಭವಿಸಿದ.[4] ರೇವಣಸಿದ್ಧನು ಸುಗ್ಗವ್ವೆಯ ಗರ್ಭವನ್ನು ಸ್ಪರ್ಶಿಸಿದ್ದರಿಂದ ಆಕೆ ಗರ್ಭಧರಿಸಿ ಸಿದ್ಧರಾಮನಿಗೆ ಜನ್ಮ ನೀಡಿದಳು.[5] ತೋಂಟದ ಸಿದ್ಧಲಿಂಗರು ಪರಮ ಗೋಸಲ ಚೆನ್ನಬಸವೇಶ್ವರನ ಹಸ್ತದಿಂದ ಜನಿಸಿದರು.[6] ಅಕ್ಕ ನಾಗಮ್ಮನು ಜಂಗಮ ಪ್ರಸಾದ ಸೇವಿಸಿದುದರ ನಿಮಿತ್ತ ಚೆನ್ನಬಸವಣ್ಣನಿಗೆ ಜನ್ಮ ನೀಡಿದಳು.[7]

ಶಿವಶರಣರಷ್ಟೇ ಹೀಗೆ ಅಲೌಕಿಕ ರೀತಿಯಿಂದ ಜನಿಸಿದವರಲ್ಲ ಜಗತ್ತಿನ ಇನ್ನು ಳಿದ ಧಾರ್ಮಿಕ ಮಹಾಪುರುಷರಾದ ಯೇಸು,[8] ಬುದ್ಧ,[9] ಝುರತುಷ್ಟ್ರ,[10] ರಾಮ,

3. ಬಸವ ಪುರಾಣ, ಸಂ : 3, ಪ : 54–57,
4. ರೇವಣಸಿದ್ಧೇಶ್ವರ ರಗಳೆ,
5. ಸಿದ್ಧರಾಮ ಚಾರಿತ್ರ, ಸಂ : 1, ಪ : 39–52,
6. ಶಿವ ತತ್ವ ಚಿಂತಾಮಣಿ, ಸಂ : 31, ಪ : 70,
7. ಚೆನ್ನಬಸವ ಪುರಾಣ, ಸಂ : 63, ಪ : 64
8. ಸತ್ಯವೇದವು, ಹೊಸ ಒಡಂಬಡಿಕೆ, ಪು : 3–4,
9. Encyclopaedia of Religion and Ethics, Vol-12, Page : 624
10. —do— —do—

ಲಕ್ಷ್ಮಣ, ಶತ್ರುಘ್ನ, ಭರತ[11] ಮುಂತಾದವರೂ ಅಲೌಕಿಕ ರೀತಿಯಿಂದ ಜನಿಸಿದವರೇ ಎಂದು ಮಹಾಕಾವ್ಯಗಳಲ್ಲಿ ವರ್ಣಿಸಿದ್ದುಂಟು. ಕುಂತಿ ಸೂರ್ಯನನ್ನು ನೆನೆದು ಕರ್ಣನಿಗೆ, ಧರ್ಮನನ್ನು ನೆನೆದು ಯುಧಿಷ್ಠಿರನಿಗೆ, ಇಂದ್ರನನ್ನು ಸ್ಮರಿಸಿ ಅರ್ಜುನನಿಗೆ ಜನ್ಮ ನೀಡಿದಳೆಂದು ವರ್ಣಿಸಿದೆ. ಶಂಕರಾಚಾರ್ಯರ ಜನನ ವೃಷಭಾಚಲೇಶ್ವರನ ಚಿತ್ಕಳೆಯು ಅವರ ತಾಯಿಯ ಗರ್ಭವನ್ನು ಸೇರಿದುದರ ನಿಮಿತ್ತ ಸಂಭವಿಸಿತು.[12] ಕಬೀರನ ತಾಯಿಯು ಇನ್ನೂ ಕನ್ಯೆಯಿರುವಾಗಲೇ ಅಲೌಕಿಕ ಶಕ್ತಿಯಿಂದ ಆತನಿಗೆ ಜನ್ಮ ನೀಡಿದಳು.[13]

ಹೀಗೆ ಜಗತ್ತಿನ ಎಲ್ಲಾ ಮಹಾಕಾವ್ಯಗಳಲ್ಲಿಯೂ ಮಹಾ ಪುರುಷರ ಜನನ ಅಲೌಕಿಕ ರೀತಿಯಿಂದಲೇ ಸಂಭವಿಸಿತೆಂದು ವರ್ಣಿಸಲಾಗಿದೆ. ಬಹುಶಃ ಇದಕ್ಕೆ ಕಾರಣ ಅಲೌಕಿಕ ರೀತಿಯ ಜನನ ಶ್ರೇಷ್ಠವೆಂದೂ, ರಕ್ತ, ಮಾಂಸ ಮಜ್ಜಾದಿಗಳಿಂದ ಕೂಡಿದ ತಾಯ್ತಂದೆಗಳ ಉದರದಿಂದ ಜನಿಸಿದ ಜನನ ಕನಿಷ್ಠವೆಂದೂ ಸಾಮಾನ್ಯ ಜನ ತಿಳಿದುದೇ ಆಗಿದೆ. ಮಹಾಪುರುಷರೆಂದಾಗ ಅವರು ಸಾಮಾನ್ಯರಂತಲ್ಲ, ಅಸಾಮಾನ್ಯರು, ಅವರ ಹುಟ್ಟೂ ಸಾಮಾನ್ಯರ ಹಾಗೆ ಇರಲಾರದು, ಎಂದು ಸಾಮಾನ್ಯ ಜನರ ನಂಬಿಕೆ. ಒಟ್ಟನಲ್ಲಿ ಈ ಆಶಯ ಜಗತ್ತಿನ ಎಲ್ಲ ಜನತೆಯಲ್ಲೂ ಒಂದೇ ವಿಧವಾಗಿದೆ.

(2) ಶರಣರ ಲೋಕಕಲ್ಯಾಣ ದೃಷ್ಟಿಯನ್ನೊಳಗೊಂಡ ಕೆಲವು ಅತಿಮಾನುಷ ಪ್ರಸಂಗಗಳನ್ನಿಲ್ಲಿ ಉದಾಹರಿಸಬಹುದು : i] ಹರಿಗಳ ಅಪ್ಪಣ್ಣನೆಂಬ ಕುಷ್ಠರೋಗಿ ಒಂದು ದಿನ ಮಾದಾರ ಧೂಳಯ್ಯನ ಬಚ್ಚಲ ನೀರಿನಲ್ಲಿ ಕಾಲಿಡಲು ಆತನ ಕುಷ್ಠರೋಗ ವಾಸಿಯಾಗುವುದು. ಆತನನ್ನು ಕಂಡ ಏಳುನೂರು ಜನ ಕುಷ್ಠರೋಗಿಗಳು ಆತನ ಬಚ್ಚಲ ನೀರಿನಲ್ಲಿ ಹೊರಳಾಡಿ ತಮ್ಮ ರೋಗವನ್ನು ವಾಸಿ ಮಾಡಿಕೊಂಡರು.[14] ii] ಬಸವಣ್ಣನ ಲಿಂಗಪೂಜೆಗೆ ಅಗ್ಘವಣಿ ತರುವ ಹೊನ್ನಯ್ಯ ಕುಷ್ಠರೋಗಿಯೆಂಬುದನ್ನರಿತ ಬಿಜ್ಜಳ ಆತನಿಗೆ ನಿಮಗೆ ಅಗ್ಘವಣಿ ತರುವವ ಕುಷ್ಠರೋಗಿಯಲ್ಲವೇ ? ಎಂದು ಪ್ರಶ್ನಿಸಿದ. ಆಗ ಬಸವಣ್ಣ–ಅಲ್ಲಲ್ಲ ! ಕುಷ್ಠರೋಗವು ಮುಕ್ತಿ ಪಡೆಯಲು ಆತನ ಬಳಿ ಬಂದಿದೆಯೆನ್ನುವನು. ಅದಕ್ಕೆ ಬಿಜ್ಜಳ ಇದೇನು ಆ ರೋಗ ಹೋಗೆಂದರೆ ಹೋಗಿ, ಬಾ ಎಂದರೆ ಬರುವುದೇ ? ಎನ್ನಲು ಬಸವಣ್ಣ ಹೌದೆನ್ನುವನು. ಹಾಗಾದರೆ ನನಗೆ ಬರಲಿ ನೋಡೋಣವೆಂದು ಬಿಜ್ಜಳ ನುಡಿಯಲು ಆ ಕ್ಷಣವೇ ಆತನಿಗೆ ಕುಷ್ಠರೋಗ ಬರುವುದು. ಅನಂತರ ಆತನ ರಾಣಿಯರು ಬಂದು ಬಸವಣ್ಣನಿಗೆ ಬೇಡಿಕೊಳ್ಳಲು ಆತನಿಗೆ

---

11. ರಾಜಾಜಿ ರಾಮಾಯಣ, ಪುಟ–8,
12. ಶ್ರೀ ಶಂಕರ ವಿಜಯ. ಪ್ರ–2, ಪುಟ : 17–19.
13. Encyclopaedia of Religion and Ethics Vol-7, Pages : 632.
14. ಬಸವ ಪುರಾಣ ಸಂ : 55, ಪ : 51–56,

ಅಂಟಿದ ಕುಷ್ಠವನು ವಾಸಿ ಮಾಡುವನು.[15] iii] ಹಾರುವರು ನಾವೆಯೊಂದರಲ್ಲಿ ಕುಳಿತು ನದಿ ದಾಟುತ್ತಿರುವಾಗ ಅದು ಗಾಳಿಯ ಹೊಡೆತಕ್ಕೆ ಸಿಕ್ಕು ಮುಳುಗತೊಡಗುವುದು. ಆಗ ಅವರೆಲ್ಲ "ಬಸವಾ ಕಾಯು," ಎನ್ನುವರು. ಆಗ ಬಸವಣ್ಣನು ಅಲ್ಲಿಗೆ ಬಂದು ಮುಳುಗುವ ನಾವೆಯನ್ನು ತಡೆದು ಅವರನ್ನು ವಿಪತ್ತಿನಿಂದ ಪಾರು ಮಾಡುವನು.[16] iv] ಒಮ್ಮೆ ಮದದಾನೆಯೊಂದು ಮಾವುತನನ್ನು ಸೊಂಡಿಲಿಂದ ಅಪ್ಪಳಿಸಲು ಆತನು 'ಬಸವ ರಕ್ಷಿಸು' ಎನ್ನುವನು. ಆಗ ಬಸವಣ್ಣ ಅಲ್ಲಿಗೆ ಬಂದು ಮಾವುತನನ್ನು ಅಂತರದಲ್ಲಿ ನಿಲ್ಲಿಸಿ ಕಾಯುವನು.[17] v] ಮೊಸರನ್ನು ಮಾರುತ್ತ ಬರುವ ಗೊಲ್ಲತಿಯೊಬ್ಬಳು ಕಾಲು ಜಾರಿ ಬೀಳುವಷ್ಟರಲ್ಲಿ 'ಬಸವಾ ಎತ್ತು' ಎಂದು ಮೊರೆಯಿಡಲು, ಆಕೆಯ ಹರವಿಯನ್ನು ಬಸವಣ್ಣ ಎತ್ತಿ ಹಿಡಿದು ಕಾಪಾಡುವನು.[18]

ಮುಳುಗುವ ನಾವೆಯನ್ನು ನಿಲ್ಲಿಸಿ ವಿಪತ್ತಿನಿಂದ ಪಾರುಮಾಡಿದ, ಕಣ್ಣಿಲ್ಲದವರಿಗೆ ಕಣ್ಣುಕೊಟ್ಟ ಅತಿಮಾನುಷ ಪ್ರಸಂಗಗಳು ಯೇಸುವಿನ ಚರಿತ್ರೆಯಲ್ಲೂ ಬಂದಿವೆ. ಮಾದಾರ ಧೂಳಯ್ಯನು ಮಿಂದ ನೀರಿನಲ್ಲೂ ಎಂಥ ಅದ್ಭುತ ಕಲ್ಯಾಣಕಾರಿ ಶಕ್ತಿ ಇದೆಯೆಂಬುದನ್ನು ಎತ್ತಿ ತೋರಿಸುವುದರ ಜೊತೆಗೆ ವರ್ಣವ್ಯವಸ್ಥೆಯ ವಿರುದ್ಧ ಪ್ರತಿ–ಭಟನೆಯೂ ಇದರ ಹಿಂದಿರುವುದನ್ನು ಇಲ್ಲಿ ಸೂಕ್ಷ್ಮವಾಗಿ ಗುರುತಿಸಬಹುದು. ಕುಷ್ಠ ರೋಗವು ಬಸವಣ್ಣನ ಆಜ್ಞೆಯಂತೆ ನಡೆದುಕೊಂಡಿತು ಎನ್ನುವಲ್ಲಿ, ಶರಣರ ಅಣತಿಯಂತೆಯೇ ರೋಗ ರುಜಿನಗಳೆಲ್ಲ ವರ್ತಿಸುತ್ತವೆಯೆಂಬ ಆಶಯ ಇಲ್ಲಿರುವುದಲ್ಲದೆ ಇಚ್ಛಾನುವರ್ತಿಗಳಾದ ಶರಣರು ಅವುಗಳನ್ನು ಜಯಿಸಿದ ಸ್ಥಿತಪ್ರಜ್ಞರೆಂಬ ತಿರುಳೂ ಇಲ್ಲಿ ಅಡಗಿದೆ.

(3) ಶರಣರ ವ್ಯಕ್ತಿಮಹಿಮೆಯನ್ನು ಸಾರುವ ಕೆಲ ಅತಿಮಾನುಷ ಪ್ರಸಂಗಗಳನ್ನಿಲ್ಲಿ ಉದಾಹರಿಸಬಹುದು : ಬಸವಣ್ಣನಿಗೆ ತುಂಬಿ ಹರಿಯುವ ನದಿ ದಾರಿ ಬಿಡುವುದು, ಸಿದ್ಧರಾಮ ತನಗೆ ಹೊಡೆಯಲು ಬಂದ ಸಿಡಿಲನ್ನು ಹೆದರಿಸಿ ಅದನ್ನು ಖಡ್ಗದಿಂದ ತಿವಿಯುವನು. ಆಗ ಆ ಸಿಡಿಲು ಆತನ ಖಡ್ಗದ ಸುತ್ತ ಸುತ್ತತೊಡಗುವುದು.[19] ಸಿದ್ಧರಾಮನು ತನ್ನ ಹೃದಯ ಬಗಿದು ಬಸವ ಮೂರ್ತಿಯನ್ನು ತೋರಿಸುವನು.[20]

---

15. ಶಿವತತ್ವ ಚಿಂತಾಮಣಿ ಸಂ–32, ಪ : 55-56,
16. ಬಸವಪವಾಡ, ಸಂ : 2, ಪ : 55
17. ಬಸವ ಪವಾಡ, ಸಂ : 2, ಪ ; 66,
18. ಬಸವ ಪುರಾಣ, ಸಂ : 9, ಪ : 1-52,
19. ಸಿದ್ಧರಾಮ ಚಾರಿತ್ರ ಸಂ ; 7. ಪ : 38-41.
20. ಬಸವ ಪುರಾಣ ಸಂ : 9, ಪ : 15–51.

ಗಂಗಾಂಬಿಕೆಯುಟ್ಟ ಸೀರೆಯನ್ನು ಒಬ್ಬ ಜಂಗಮ ಬೇಡಲು ಬಸವಣ್ಣ ಆಕೆಯನ್ನು ಸಭೆಗೆ ಕರೆಸಿ ಆಕೆಯ ಸೀರೆಯನ್ನು ಸೆಳೆಯುವನು. ಸೆಳೆ ಸೆಳೆದಂತೆ ಅದು ಅಕ್ಷಯ ವಾಗುವುದು.[21] ಸಿದ್ಧರಾಮನ ಹಣೆಗಣ್ಣಿನಿಂದ ಹೊರಟ ಉರಿಯನ್ನು ಅಲ್ಲಮ ಪ್ರಭು ತನ್ನ ಕಾಲಿನ ಉಂಗುಟದಿಂದ ಆರಿಸುವನು. ಗೋರಕ್ಷನು ಅಲ್ಲಮನಿಗೆ ಖಡ್ಗದಿಂದ ಹೊಡೆದರೂ ಆತನ ದೇಹ ತುಂಡಾಗಲಿಲ್ಲ.[22] ಇಂಥ ಅನೇಕ ಅತಿಮಾನುಷ ಸಂಗತಿ ಗಳು ವೀರಶೈವ ಮಹಾಕಾವ್ಯಗಳಲ್ಲಿ ವರ್ಣನೆಗೊಂಡಿವೆ. ಇವುಗಳ ಹಿಂದಿರುವ ಆಶಯ ಶರಣರು ನಿಸರ್ಗವನ್ನೂ ತಮ್ಮ ಅಂಕಿತದಲ್ಲಿಟ್ಟುಕೊಂಡವರು. ಗುಡುಗು, ಸಿಡಿಲು. ನದಿ ಇವೆಲ್ಲ ಅವರ ಆಜ್ಞೆಯಂತೆಯೇ ನಡೆಯುವವು, ಎಂಬ ಆಶಯವಿಲ್ಲಿದೆ, ದ್ರೌಪದಿಯ ವಸ್ತ್ರಾಪಹರಣ ಪ್ರಸಂಗದಲ್ಲಿ ಶ್ರೀಕೃಷ್ಣ ಆಕೆಯ ವಸ್ತ್ರ ಅಕ್ಷಯವಾಗು ವಂತೆ ಮಾಡಿದ. ಇದನ್ನು ತಿಳಿದ ವೀರಶೈವ ಕವಿಗಳೂ ಬಸವಣ್ಣನೇನು ಶ್ರೀಕೃಷ್ಣ ನಿಗಿಂತ ಕಡಿಮೆಯವನಲ್ಲವೆಂದು ಬಗೆದು ಗಂಗಾಂಬಿಕೆಯ ವಸ್ತ್ರ ಅಕ್ಷಯವಾದ ಅತಿ ಮಾನುಷ ಪ್ರಸಂಗವನ್ನು ವರ್ಣಿಸಿದ್ದಾರೆ. 'ರಾಮಾಯಣ' ಮಹಾಕಾವ್ಯದಲ್ಲಿ ಹನುಮಂತ ಲಕ್ಷ್ಮಣನಿಗೆ ಸಂಜೀವಿನಿ ಕಡ್ಡಿ ತರಲು ಹೋಗಿ ಬೆಟ್ಟವನ್ನೇ ಎತ್ತಿ ತಂದರೆ, ಇಲ್ಲಿ ಬಿಜ್ಜಳನು ಶರಣರ ಸಾಮರ್ಥ್ಯದ ಬಗ್ಗೆ ಅಣಕು ನುಡಿ ನುಡಿದಾಗ ಹಡಪದಪ್ಪಣ್ಣ ತನ್ನ ಕಿರುಬೆರಳಿನಲ್ಲಿ ಬೆಟ್ಟವನ್ನೇ ಎತ್ತಿ ತಂದು ತೋರಿಸಿದನೆಂದು ಬಣ್ಣಿಸಿದೆ.[23] ಬಸವಣ್ಣನ ಮೇಲೆ ಬಿಜ್ಜಳನ ಭಂಡಾರದ ಧನ ಅಪವ್ಯಯ ಮಾಡಿದ ಆರೋಪ ಬಂದಾಗ ಆತ ಭಂಡಾರದಲ್ಲಿನ ಹಣವನ್ನು ಸ್ಪರ್ಶಿಸಿ, ಇಮ್ಮಡಿ, ಮುಮ್ಮಡಿ, ನೂರ್ಮಡಿ ಯಾಗುವಂತೆ ಮಾಡುವನು.[24]

ವೀರಶೈವ ಧರ್ಮದ ತತ್ವ, ಶರಣರ ವ್ಯಕ್ತಿತ್ವ ಹಾಗೂ ಆಚರಣೆಗಳನ್ನು ಕುರಿತು ಲಘುವಾಗಿ ಮಾತಾಡಿದಾಗ, ಅವನ್ನು ಪ್ರಶ್ನೆಗೊಳಪಡಿಸಿದಾಗ ಕವಿಗಳು ಇಂತಹ ಅತಿ ಮಾನುಷ ಪವಾಡಕಥೆಗಳನ್ನು ಕಟ್ಟಿ ಸಮರ್ಥಿಸಿಕೊಂಡಿದ್ದಾರೆ. ಶಿವಶರಣರು ಇನ್ನುಳಿದ ಧಾರ್ಮಿಕ ಮಹಾಪುರುಷರಿಗಿಂತ ಕಡಿಮೆಯವರಲ್ಲವೆಂಬುದನ್ನೂ ಇಂಥ ಕಥೆಗಳ ಮೂಲಕ ಸಾರಲು ಯತ್ನಿಸಿದ್ದು ಇಲ್ಲಿ ಸ್ಪಷ್ಟವಾಗುವುದು.

(4) ವೀರಶೈವ ಧರ್ಮದ ತತ್ವಗಳನ್ನು ಸಾಮಾನ್ಯ ಜನರಿಗೆ ತಿಳಿಸಲು ಕೆಲವು ಅತಿಮಾನುಷ ಪ್ರಸಂಗಗಳನ್ನು ವರ್ಣಿಸಿರುದನ್ನಿಲ್ಲಿ ನೋಡಬಹುದು : ಬಸವಣ್ಣನು ಮಲಗಿಕೊಂಡಿದ್ದಾಗ ಆತನನ್ನು ಭೆಟ್ಟಿಯಾಗಲು ಕೆಲವು ಭಕ್ತರು ಬರುವರು. ಆತ

---

21. ಬಸವ ಪುರಾಣ ಸಂ 10, ಪ : 20-84.
22. ಪ್ರಭುಲಿಂಗಲೀಲೆ.
23. ಗುರುರಾಜ ಚಾರಿತ್ರ, ಸಂ : 6, ಪ : 71.
24. ಬಸವರಾಜ ದೇವರ ರಗಳೆ ಸ್ಥಲ-8.

ಮಲಗಿದ ವಿಷಯವನ್ನು ದ್ವಾರಪಾಲಕನಿಂದ ತಿಳಿದು ಹಾಗೆಯೇ ಹಿಂದಿರುಗಿ ಹೋಗುವರು. ಆಗ ಬಸವಣ್ಣನ ಪ್ರಾಣವೂ ಅವರನ್ನು ಹಿಂಬಾಲಿಸಿ ಹೋಗುವುದು. ಇತ್ತ ಆತನನ್ನು ಎಬ್ಬಿಸಲು ಆತನ ದೇಹದಲ್ಲಿ ಪ್ರಾಣವಿರಲಿಲ್ಲ. ಶರಣರು ನಡೆದುದನ್ನು ತಿಳಿದು ಆ ಭಕ್ತರನ್ನು ಕರೆಸುವರು. ಆಗ ಬಸವಣ್ಣನ ದೇಹದಲ್ಲಿ ಪ್ರಾಣ ಬಂದು ಆತನು ಎದ್ದು ಕೂಡುವನು.[25] ಬಸವಣ್ಣ ಭಕ್ತರನ್ನು, ಜಂಗಮರನ್ನು ತನ್ನ ಪ್ರಾಣಕ್ಕಿಂತಲೂ ಮಿಗಿಲಾಗಿ ಆರಾಧಿಸುತ್ತಿರುವ 'ಜಂಗಮ ಪ್ರಾಣಿ' ಎಂಬ ತತ್ವವನ್ನಿದು ಸರಳೀಕರಿಸಿ ತಿಳಿಸಿದೆ. (2) ಶಿವನಾಗಮಯ್ಯನ ಸೇವಕಿ ಆತನ ಲಿಂಗಪೂಜೆಗೆ ಅಗ್ಘವಣಿ ತರ ಹೋದಾಗ ಆಕೆಯನ್ನು ಬಿಜ್ಜಳನ ದಾಸಿ ಮುಟ್ಟಬರುವಳು. ಆಗ ಆಕೆ ದೂರ ಸರಿ ಮುಟ್ಟಬೇಡ ಎನ್ನಲು, ಆಕೆ ಅವಮಾನಿತಳಾಗಿ ಬಿಜ್ಜಳನಿಗೆ ದೂರಿಡುವಳು. ಆತ– ಬಸವಣ್ಣನನ್ನು ಕರೆಸಿ, ಏನು ನಿಮ್ಮ ದಾಸಿಗೆ ಅದೆಷ್ಟು ಸೊಕ್ಕು ? ನಿಮ್ಮ ಶೀಲದಂತೆ ಅಗ್ಘವಣಿಯೂ ಗಟ್ಟಿಯೇ ಎನ್ನಲು, ಬಸವಣ್ಣನು ಹೌದೆನ್ನುವನು. ಆಗ ಬಿಜ್ಜಳ ಆಕೆಯನ್ನು ಸಭೆಗೆ ಕರೆಸಿ ಒಂದು ಬಡಿಗೆಯಿಂದ ಆಕೆಯ ಕೊಡಕ್ಕೆ ಹೊಡೆಯುವನು. ಕೊಡ ಒಡೆದರೂ ಒಳಗಿರುವ ಅಗ್ಘವಣಿ ಹಾಗೆಯೇ ಕೊಡದಾಕೃತಿಯಲ್ಲಿಯೇ ಉಳಿಯುವುದು.[26] 3) ತಮಿಳುನಾಡಿನ ಸತ್ಯೇಂದ್ರ ಚೋಳನ ಮಗನಾದ ರಾಜಶೇಖರ ಪಂಚಾಕ್ಷರಿ ಮಂತ್ರದ ಉಚ್ಚಾರಣೆಯಲ್ಲಿ ತೊಡಗಿದಾಗ ಆತನಿಗೆ ಹೊಡೆದ ಖಡ್ಗವು ಹೂವಿನ ಹಾರವಾಗುವುದು ಹಾಗೂ ಪಂಚಾಕ್ಷರಿ ಮಂತ್ರದಿಂದ ಮಡಿದವರಿಗೆಲ್ಲರಿಗೂ ಪ್ರಾಣ ಬರಿಸುವ ಸಂಗತಿ ರಾಜಶೇಖರ ವಿಳಾಸದಲ್ಲಿ ವರ್ಣನೆಗೊಂಡಿದೆ.[27] ಪಂಚಾಕ್ಷರಿ ಮಂತ್ರದ ಮಹಿಮೆ ಪ್ರದರ್ಶಿಸುವ ಈ ಕಥೆಯಂತೆ ಪ್ರಸಾದ ಕುರಿತೂ ಇಂಥ ಅನೇಕ ಅತಿಮಾನುಷ ಸಂಗತಿಗಳು ವರ್ಣನೆಗೊಂಡಿವೆ. ಶ್ವಪಚ ಶಿವನಾಗಮಯ್ಯನ ಮನೆಯಲ್ಲಿ ಬಸವಣ್ಣ ಪ್ರಸಾದ ಸೇವಿಸಿ ಬಂದುದನ್ನು ಬಿಜ್ಜಳ ಆಕ್ಷೇಪಿಸಿದಾಗ ಬಸವಣ್ಣ ಶಿವನಾಗಮಯ್ಯನ ಉಂಗುಟದಿಂದ ಹಾಲುಹರಿಸಿ ಆತ ಶ್ರೇಷ್ಠ ಶಿವ ಭಕ್ತನೆಂದು ಸಾರಿದ.[28] ಹೀಗೆ ಅತಿಮಾನುಷತೆ ಕಾಲಕ್ಕೆ ತಕ್ಕಂತೆ ತನ್ನ ಸ್ವರೂಪವನ್ನು ಬದಲಿಸಿಕೊಂಡು ವೀರಶೈವ ಧರ್ಮದ ತತ್ವಗಳ ಪ್ರಸಾರಕ್ಕಾಗಿ ವರ್ಣನೆಗೊಳ್ಳುತ್ತ ಬಂದರೆ, ಉಳಿದ ಜೈನ ಹಾಗೂ ಬ್ರಾಹ್ಮಣ ಮಹಾಕಾವ್ಯಗಳಲ್ಲಿ ರಮ್ಯತೆ, ಕಾವ್ಯ ಸೌಂದರ್ಯ ವೃದ್ಧಿಗೊಳಿಸುವ ಉದ್ದೇಶದಿಂದ ವರ್ಣಿತಗೊಂಡಿದೆ. ಅಸಂಭಾವ್ಯ, ಅತಿಮಾನುಷ ಪ್ರಸಂಗಗಳಿಂದ ಮಹಾಕಾವ್ಯಕ್ಕೆ ಒಂದು ವಿಧದ ಭವ್ಯತೆ, ರಮ್ಯತೆ ಉಂಟಾಗುವುದಲ್ಲದೆ, ಇಂಥವುಗಳಿಂದ

---

25. ಬಸವರಾಜ ದೇವರ ರಗಳೆ ಸ್ಥಲ : 9
26. ಶಿವತತ್ವ ಚಿಂತಾಮಣಿ, ಸ : 32, ಪ 35.
27. ರಾಜಶೇಖರ ವಿಳಾಸ,
28. ಬಸವ ಪುರಾಣ ಸಂ : 56, ಪ : 70–82.

ಸಹೃದಯನೂ ಆನಂದಗೊಳ್ಳುವನು. ಇಂಥ ಪ್ರಸಂಗಗಳು ವಿಶಾಲ ದೃಷ್ಟಿ–ಧೋರಣೆ ಯನ್ನು ತಂದುಕೊಟ್ಟು, ಮಾನವೀಯ ಶಕ್ತಿಗೂ ಮಿಗಿಲಾದ ದೈವೀ ಶಕ್ತಿಯ ಪರಿ ಚಯ ಮಾಡಿಸುವವು. ಅಂಥ ಕೆಲವು ಪ್ರಸಂಗಗಳು ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾಮಂಜರಿ' ಯಲ್ಲಿ ವರ್ಣಿತಗೊಂಡುದನ್ನಿಲ್ಲಿ ನೋಡಬಹುದು : ಮೊದಲನೆ ಯದಾಗಿ ಕರ್ಣಜನನ ಪ್ರಸಂಗ : ಕುಂತಿ ಸೂರ್ಯನನ್ನು ನೆನೆಯಲು ಆತ ಬಂದು, ಆ ಭೀರುವನ್ನು ಸ್ಪರ್ಶಿಸಲು, ಕರ್ಣ ಜನಿಸಿದ. ಆಗ ಆಕೆಯು ಜನಾಪವಾದಕ್ಕೆ ಹೆದರಿ ಆ ಕೂಸನ್ನು ಗಂಗಾನದಿಯಲ್ಲಿ ಹಾಕುವಳು. ನದಿ ತನ್ನ ಅಲೆಕೈಗಳಿಂದ ಆ ಮಗು ವನ್ನು ದಂಡೆಗೆ ಹಾಕಲು ಅದು ಮರಳಲ್ಲಿ ಅಳುತ್ತ ಬೀಳುವುದು. ಸೂರ್ಯ ಈ ದೃಶ್ಯ ವನ್ನು ನೋಡಿಯೂ ಏನೂ ಮಾಡಲಿಲ್ಲವಂತೆ ! ಆ ಪ್ರಸಂಗದ ವರ್ಣನೆ ಹೀಗಿದೆ–

"ಕೆದರಿ ಕಾಲಲಿ ಮಳಲ ರಾಶಿಯ
ನೊದೆದು ಕೈಗಳ ಕೊಡಹಿ ಭೋಯೆಂ
ದೊದರುತಿರ್ದನು ಶಿಶುಗಳರಸನು ರವಿಯನೀಕ್ಷಿಸುತ"[29]

ಅತಿಮಾನುಷ ಸಂದರ್ಭದ ಹಿನ್ನೆಲೆಯಲ್ಲಿ ವರ್ಣನೆಗೊಂಡ ಈ ಸನ್ನಿವೇಶ ಓದುಗರ ಕರುಣೆಗೆ ಪಾತ್ರವಾಗುವುದಲ್ಲದೆ, ಅದು ಭೂಮ್ಯಾಕಾಶಗಳನ್ನು ಆವರಿಸಿ ನಿಲ್ಲುವುದು. ಇದರಂತೆಯೇ ಸೌಗಂಧಿಕಾ ಪುಷ್ಪಹರಣ ಪ್ರಸಂಗದಲ್ಲಿ ವಾಯು ತನ್ನ ಮಗನಾದ ಭೀಮನನ್ನು ಅಪ್ಪಿಕೊಳ್ಳುವ ಸನ್ನಿವೇಶ ಈ ಕೆಳಗಿನ ಪದ್ಯದಲ್ಲಿ ಸೊಗಸಾಗಿ ಮೂಡಿ ನಿಂತುದನ್ನು ಕಾಣಬಹುದು :

"ಒಗುಮಿಗೆಯ ಪರಿಮಳದ ಕಂಪಿನ
ತಗಡ ತೆಕ್ಕೆಯ ಬೀದಿವರಿಗಳ
ಮುಗುಳ ಮೊಗ್ಗೆಯ ತೆಗೆವ ತುಂಬಿಯ ಲಳಿಯ ಲಗ್ಗೆಗಳ
ಹೊಗರ ಹೊರಳಿಯ ಕಿರುದೆರೆಯ ನೂ
ಕುಗಳ ತಳಿತ ತುಷಾರ ಭಾರದ
ಸೊಗಸ ಸೇರಿಸಿ ಮಂದಮಾರುತನಪ್ಪಿದನು ಮಗನ"[30]

ಇಲ್ಲಿ ಗಾಳಿ ಬೀಸುವುದರಿಂದಾಗುವ ಸುಖದ ವರ್ಣನೆಯಷ್ಟೇ ಇರದೆ, ಅದು ತಬ್ಬಿ ಕೊಳ್ಳುವ ವಿವರಣೆಯೂ ಇದೆ. ತಂದೆಮಗನ ವಾತ್ಸಲ್ಯವಿಲ್ಲಿ ಕೋಡಿವರಿದಿದೆ. ಮಾರುತನ ಮಗ ಭೀಮನೆಂಬ ಅತಿಮಾನುಷತೆಗೆ ಇಲ್ಲಿ ಕಳೆ ಕಟ್ಟಿದೆ.

ರತ್ನಾಕರವರ್ಣಿಯು 'ಭರತೇಶ ವೈಭವ'ದಲ್ಲಿ ಭರತೇಶನನ್ನು ಒಬ್ಬ ಅತಿ ಮಾನುಷ, ಅಲೌಕಿಕ ವ್ಯಕ್ತಿಯಂತೆ ಚಿತ್ರಿಸಿದ್ದಾನೆ. ಭರತೇಶನ ಭೋಗ ಜೀವನ

---

29. 'ಕರ್ಣಾಟ ಭಾರತ ಕಥಾಮಂಜರಿ' ಆದಿಪರ್ವ, ಸಂ : 3, ಪ : 23
30. 'ಕರ್ಣಾಟ ಭಾರತ ಕಥಾ ಮಂಜರಿ' ಅರಣ್ಯಪರ್ವ, ಸಂ : 10, ಪ : 43,

ವಂತೂ ಇಲ್ಲಿ ಅನನ್ಯವಾಗಿ ವರ್ಣನೆಗೊಂಡಿದೆ. ಆತ ತೊಂಬತ್ತಾರು ಸಾವಿರ ರಾಣಿ ರೊಡನೆ ಸುಖಿಸುತ್ತಿರುವ ಭೋಗಿಯಾಗಿದ್ದೂ ಆತ ಯೋಗಿ. ಉಂಡುಪವಾಸಿ ಬಳಸಿ ಬ್ರಹ್ಮಚಾರಿಯಂತೆ ಚಿತ್ರಣಗೊಂಡ ಭರತೇಶ ಕನ್ನಡ ಮಹಾಕಾವ್ಯಗಳಲ್ಲಿಯೇ ಅತ್ಯದ್ಭುತ, ಅತಿಮಾನುಷ ಶಕ್ತಿಯುಳ್ಳ ನಾಯಕನಾಗಿ ಚಿತ್ರಿತನಾಗಿದ್ದಾನೆ.

ಕವಿಗಳು ಹೀಗೆ ಮಹಾಕಾವ್ಯಗಳಲ್ಲಿ ಅಸಂಭಾವ್ಯವಾದ, ಅಸತ್ಯವಾದ ಸಂಗತಿಗಳನ್ನು ಬಣ್ಣಿಸುವುದರ ಮೂಲಕ ಸತ್ಯವಾಗಿಸಿ,ಸಾಧ್ಯವಾಗಿಸಿ, ತೋರಿಸುವರು. ಎಂಥ ಕಸದಲ್ಲೂ ರಸವನ್ನು ತೆಗೆವ ಶಕ್ತಿ ಅವರಿಗಿದೆ. ಆದಕ್ಕೇ ರವಿ ಕಾಣದ್ದನ್ನು ಕವಿ ಕಂಡ ಎನ್ನುವುದು. ಕವಿಗಳಿಗಿರುವ ಇಂಥ ಅದ್ಭುತ ಶಕ್ತಿಯನ್ನು ನೇಮಿಚಂದ್ರ ಒಂದೆಡೆ ಹೀಗೆ ಬಣ್ಣಿಸಿದ್ದಾನೆ :

"ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ನಾಮನ ಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿ ಬಂಧದೊಳೆತ್ತಿ ಕಟ್ಟಿದರ್
ಮುಟ್ಟಿದರೊತ್ತಿ ಮೆಟ್ಟಿದರದೇನಳ ವಗ್ಗಳ ಮೋ ಕವೀಂದ್ರರಾ"

ರಾಮ ಕಪಿಗಳಿಂದ ಸಮುದ್ರಕ್ಕೆ ಸೇತುವೆ ಕಟ್ಟಿಸಿ ರಕ್ಕಸರನ್ನು ಸದೆ ಬಡಿದ, ಅರ್ಜುನ ಹರನ ಗಂಟಲ ಮೆಟ್ಟಿದನೆಂದು ಕವಿಗಳು ಅಸಂಭಾವ್ಯವಾದ ಈ ಸಂಗತಿಗಳನ್ನು ತಮ್ಮ ಕಾವ್ಯಗಳಲ್ಲಿ ಸಲೀಸಾಗಿ ಮಾಡಿದರೆಂದು ವರ್ಣಿಸಿದ್ದಾರೆ. ಅಲ್ಲಿ ಆ ಲೋಕ ಈ ಲೋಕ ವೆಂಬ ತಾರತಮ್ಯವಿಲ್ಲ. ಮಾನವರು–ದೇವರು ಎಂಬ ಭೇದವಿಲ್ಲ. ಇಂಥ ಅತಿ ಮಾನುಷ ಪ್ರಸಂಗಗಳನ್ನು ವರ್ಣಿಸುವುದರ ಮೂಲಕ ಕವಿ ಸಹೃದಯರನ್ನು ಕ್ಷಣ ಹೊತ್ತು ಲೌಕಿಕ ಜಂಜಡಗಳಿಂದ ಬಿಡುಗಡೆಗೊಳಿಸುವನು. ಆಗ ಅವರು ಅಲೌಕಿಕ ಸಂಗತಿಗಳನ್ನು ಮೆಲುಕು ಹಾಕುತ್ತ ಅಲೌಕಿಕ ಜಗತ್ತಿನಲ್ಲಿ ವಿಹರಿಸುವರು. ಅಲ್ಲಿದ್ದು ಕೊಂಡು ಅವರಿಗೆ ಮರ್ತ್ಯದ ವ್ಯವಹಾರಗಳನ್ನು ನೋಡುವುದು ಬಲು ಸೊಗಸೆನ್ನಿಸು ವುದು. "ಬೆನ್ನಟ್ಟಿ ಬರುವ ಹುಲಿಯನ್ನು ವಂಚಿಸಿ ಮರವನ್ನೇರಿ ನಿಂತು ಭಯ ವಿದೂರನಾಗಿ ಆ ಕ್ಷೇಮಸ್ಥಾನದಿಂದ ಆ ಹುಲಿಯನ್ನು ವೀಕ್ಷಿಸುತ್ತ 'ಎಂಥ ಸುಂದರವಾದ ಪ್ರಾಣಿ' ಎನ್ನುವ ದಾರಿಗನಂತೆ, ಕವಿ ನಮಗಾಗಿ ನಿರ್ಮಿಸುವ ಇಂಥ ಶಿವಸ್ಥಾನಗಳಿಂದ ಜಗತ್ತು ತನ್ನ ಅಶಿವತೆಯನ್ನೆಲ್ಲ ಕಳೆದುಕೊಂಡು ನಮಗೆ ರಮ್ಯವಾಗಿ ತೋರುತ್ತದೆ".31 ಎನ್ನುವ ಪು. ತಿ. ನ. ಅವರ ಮಾತು ಅತಿಮಾನುಷತೆಯನ್ನು ಪರಿಭಾವಿಸುವ ಪರಿ ಯನ್ನು ಔಚಿತ್ಯಪೂರ್ಣವಾಗಿ ಸೂಚಿಸಿದೆ.

ಮಹಾಕಾವ್ಯಗಳ ಕಾಲ ಮುಗಿಯಿತು, ಆಧುನಿಕ ಯುಗದಲ್ಲಿ ಅವು ಅಪ್ರಸ್ತುತ ಎಂದೆಲ್ಲ ಕೆಲವರು ಅಭಿಪ್ರಾಯಪಟ್ಟರೂ, ಕೆಲವು ಶ್ರೇಷ್ಠ ಮಹಾಕಾವ್ಯಗಳು ಹೊಸಗನ್ನಡ

31. ಕಾವ್ಯ ಕುತೂಹಲ, ಪುಟ, 70.

ದಲ್ಲಿಯೂ, ಸೃಷ್ಟಿಗೊಂಡು ಮಹಾಕಾವ್ಯ ಪರಂಪರೆಯನ್ನು ಮುಂದುವರಿಸಿವೆ. ಅವುಗಳಲ್ಲಿ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ', ವಿ. ಕೃ. ಗೋಕಾಕ ಅವರ ಭಾರತ ಸಿಂಧು ರಶ್ಮಿ' ಸಂ. ಶಿ. ಭೂಸನೂರ ಮಠರ 'ಭವ್ಯ ಮಾನವ'- ಶ್ರೀನಿವಾಸರ 'ಶ್ರೀರಾಮಪಟ್ಟಾಭಿಷೇಕ' ಜ.ಚ.ನಿ.ಯವರ 'ಸದಾಶಿವರುದ್ರಂ', ಪು.ತಿ.ನ. ಅವರ 'ಶ್ರೀಹರಿಚರಿತೆ' ಮುಂತಾದವುಗಳನ್ನು ಹೆಸರಿಸಬಹುದು. ಇವುಗಳಲ್ಲಿ ಪ್ರಾಚೀನ ಮಹಾಕಾವ್ಯಗಳಲ್ಲಿಯಂತೆ ಅತಿಮಾನುಷತೆ-ಅಷ್ಟಾಗಿ ವರ್ಣನೆಗೊಂಡಿಲ್ಲ-ಶ್ರೀನಿವಾಸರ 'ಶ್ರೀರಾಮಪಟ್ಟಾಭಿಷೇಕ'ದಲ್ಲಿ ಅತಿಮಾನುಷ ಪ್ರಸಂಗಗಳನ್ನು ಕೈಬಿಡಲಾಗಿದೆ. ಹನುಮಂತ ಇಲ್ಲಿ ಸಮುದ್ರವನ್ನು ಹಾರಿ ದಾಟದೆ, ಈಜಿ ದಾಟುತ್ತಾನೆ. (ಸಮುದ್ರವನ್ನು ಈಸಿ ದಾಟುವುದೂ ಮನುಷ್ಯ ಶಕ್ತಿಗೆ ಮೀರಿದ್ದೇ.) ರಾಮ ಅಯೋಧ್ಯೆಗೆ ಹಿಂದಿರುಗುವಾಗ ಆಕಾಶ ಮಾರ್ಗದಲ್ಲಿ ಪುಷ್ಪಕ ವಿಮಾನದಲ್ಲಿ ಬರದೆ, ಪರಿವಾರದೊಡನೆ ನಡೆದುಕೊಂಡೇ ಬರುತ್ತಾನೆ. ಪವಾಡಗಳಂಥ ಅತಿಮಾನುಷ ಪ್ರಸಂಗಗಳಿಲ್ಲದೆಯೂ ಮಹಾಕಾವ್ಯ ರಚಿಸಬಹುದೆಂಬುದಕ್ಕೆ ಇದು ಸಾಕ್ಷಿಯಾಗಿದೆ. ಆದರೆ ಕುವೆಂಪು ಅವರ 'ಶ್ರೀರಾಮಾಯಣದರ್ಶನಂ' ಹಾಗೂ ಗೋಕಾಕರ 'ಭಾರತಸಿಂಧುರಶ್ಮಿ'ಗಳಲ್ಲಿ ಅತಿಮಾನುಷತೆ ಕೆಲವೆಡೆ ಬಂದುದನ್ನು ಗುರುತಿಸುವೆವು. ಶ್ರೀರಾಮಾಯಣ ದರ್ಶನದಲ್ಲಿ, ರಾಮ, ಲಕ್ಷ್ಮಣ, ಶತ್ರುಘ್ನ ಹಾಗೂ ಭರತ ಇವರು ಯಜ್ಞದಲ್ಲಿ ದೊರೆತ ಪಾಯಸ ಪ್ರಸಾದವನ್ನು ಇವರ ತಾಯಂದಿರು ಸೇವಿಸಿದುದರ ನಿಮಿತ್ತ ಜನಿಸಿದವರೆಂದೂ, ವಿಶ್ವಕರ್ಮನ ಮಗ ನಳನ ಆದೇಶದಂತೆ ಕಪಿವೀರರು ಗುಡ್ಡ ಬೆಟ್ಟಗಳನ್ನು ಚೆಂಡಿನಂತೆ ಹೊತ್ತು ತಂದು ಸಮುದ್ರದಲ್ಲಿ ಹಾಕಿ ಸೇತುವೆ ನಿರ್ಮಿಸಿದರೆಂದೂ ವರ್ಣಿಸಿದೆ. ಭಾರತ ಸಿಂಧು ರಶ್ಮಿಯಲ್ಲಿ ಮಂತ್ರ ಪಾಯಸಕ್ಕೆ ಮಕ್ಕಳು ಹುಟ್ಟುವ, ವಿಶ್ವಾಮಿತ್ರರ ಮಂತ್ರದಿಂದ ನದಿ ದಾರಿ ಬಿಡುವ, ಸತ್ತ ರೇಣುಕೆ ಪುನಃ ಬದುಕುವ, ಮಂತ್ರಾಸ್ತ್ರಗಳು ಆಧುನಿಕ ಬಾಂಬುಗಳಂತೆ ಕೆಲಸ ಮಾಡುವ-ಮುಂತಾದ ಅತಿಮಾನುಷ ಸಂಗತಿಗಳು ವರ್ಣನೆಗೊಂಡುದನ್ನು ಕಾಣುವೆವು.

ಸಂಸ್ಕೃತ ಮಹಾಕಾವ್ಯಗಳ ಮೇಲ್ಪಂಕ್ತಿಯನ್ನು ಅನುಕರಿಸಿ ರಚನೆಗೊಂಡ ಕನ್ನಡ ಮಹಾಕಾವ್ಯಗಳಲ್ಲಿ ಮೊದ-ಮೊದಲು ಅತಿಮಾನುಷತೆ ಅಷ್ಟಾಗಿ ಚಿತ್ರಣಗೊಳ್ಳಲಿಲ್ಲ. ಮುಂದೆ ಹನ್ನೆರಡನೇ ಶತಮಾನದ ಬಸವಾದಿ ಶರಣರ ಅನಂತರ ಹುಟ್ಟಿಕೊಂಡ ವೀರಶೈವ ಮಹಾಕಾವ್ಯ-ಪುರಾಣಗಳಲ್ಲಿ ಇದು ಹೆಚ್ಚಾಗಿ ವರ್ಣನೆಗೊಂಡಿತು. ಐತಿಹಾಸಿಕ ವ್ಯಕ್ತಿಗಳಾದ ಶರಣರು ಪುರಾಣ-ಪುರುಷರಂತೆ ಚಿತ್ರಣಗೊಂಡರು. ಇದನ್ನು ಕಂಡು ಮುಂಬಂದ ಕೆಲವು ಜೈನ ಹಾಗೂ ಬ್ರಾಹ್ಮಣ ಕವಿಗಳೂ ತಂತಮ್ಮ ಮಹಾಕಾವ್ಯಗಳಲ್ಲಿ ಅತಿಮಾನುಷತೆಯನ್ನು ಚಿತ್ರಿಸತೊಡಗಿದರು. ಇದಕ್ಕೆ ಕಾರಣ ಅಂದಂದಿನ ಧಾರ್ಮಿಕ ಹಾಗೂ ಸಾಮಾಜಿಕ ಸ್ಥಿತಿಗತಿಗಳೇ ಎನ್ನಬಹುದು. ವೀರಶೈವ ಕವಿಗಳೇ ತಮ್ಮ ಕೃತಿಗಳಲ್ಲಿ ಅತಿಮಾನುಷ ಪ್ರಸಂಗಗಳನ್ನು ಹೆಚ್ಚಾಗಿ ವರ್ಣಿಸಿದುದರ ಉದ್ದೇಶ

ಶಿವಶರಣರನ್ನು 'ರಾಮಾಯಣ', 'ಮಹಾಭಾರತ' ಹಾಗೂ ಅಷ್ಟಾದಶಪುರಾಣಗಳ ನಾಯಕರುಗಳ ಘನತೆಗೆ ಏರಿಸುವುದು. ಇವರೂ ಅವರಂತೆ ಮಹಿಮಾಶಾಲಿಗಳು, ಜಗತ್ತಿನ ಇನ್ನುಳಿದ ಧಾರ್ಮಿಕ ಮಹಾಪುರುಷರಂತೆ ಅತಿಮಾನುಷ ಶಕ್ತಿಯುಳ್ಳವರೆಂದು ಸಾರುವುದು ಹಾಗೂ ವೀರಶೈವಧರ್ಮದ ತತ್ವಗಳನ್ನು ಪ್ರಸಾರಗೊಳಿಸುವುದೂ ಆಗಿದೆ ಯೆಂಬುದನ್ನು ಈವರೆಗೆ ನೋಡಿದೆವು.

ಒಟ್ಟಿನಲ್ಲಿ ಜಗತ್ತಿನ ಎಲ್ಲ ಮಹಾಕಾವ್ಯಗಳಲ್ಲೂ ಅತಿಮಾನುಷತೆ ಒಂದಿಲ್ಲೊಂದು ರೀತಿಯಲ್ಲಿ ವರ್ಣಿತಗೊಂಡಿದೆ. ಇದರಿಂದ ಇದೊಂದು ಸಾಮಾನ್ಯವಾದ, ಸರ್ವವ್ಯಾಪಿ ಯಾದ ಆಶಯವಾಗಿದೆಯೆಂಬುದು ಈ ಮೇಲಿನ ವಿವೇಚನೆಯಿಂದ ವಿದಿತವಾಗುವುದು.

—o—

# ಪಂಪ ಕವಿ : ಹೆಸರಿನ ಬಗೆಗೆ ಒಂದು ವಿವೇಚನೆ

—ಜಿ. ಎ. ಶಿವಲಿಂಗಯ್ಯ

ಕರ್ನಾಟಕ ಸಾಹಿತ್ಯ ಸಾರ್ವಭೌಮ, ಆದಿಕವಿ ಎಂಬುದಾಗಿ ಆಧುನಿಕರಾದ ನಮ್ಮಿಂದ ಕರೆಯಿಸಿಕೊಳ್ಳುತ್ತಿರುವ ಪಂಪಕವಿಯ ಬಗೆಗೆ, ಕಾವ್ಯದ ಬಗೆಗೆ ಲೇಖನಗಳು ಇನ್ನೂ ಬರುತ್ತಿವೆ. ಹಾಗೆ ಬರಲೇಬೇಕು. ಈ ಲೇಖನದಲ್ಲಿ ಪಂಪನನ್ನು ಕುರಿತ, ಮುಖ್ಯವಾಗಿ ಅವನ ಹೆಸರಿನ ಬಗೆಗೆ ಒಂದು ವಿವೇಚನೆಯನ್ನು ಮಾಡಲಾಗಿದೆ.

ಮಾನ್ಯ ಕ. ವೆಂ. ರಾಜಗೋಪಾಲ ಅವರು "ಪಂಪಕವಿ (ಒಂದು ಟಿಪ್ಪಣಿ-1989)" ಎಂಬ ಲೇಖನದಲ್ಲಿ (ಸಾಹಿತ್ಯ ಪರಿಷತ್ಪತ್ರಿಕೆ 1989 ಜೂನ್-ಡಿಸೆಂಬರ್ ಸಂಚಿಕೆ) "ಪಂಪಕವಿಯನ್ನು ಕುರಿತ ಶೋಧವಿನ್ನೂ ಬೆಳೆಯುತ್ತಲೇ ಬಂದಿರುವುದರಿಂದ ಈ ಟಿಪ್ಪಣಿಯನ್ನು ಗುರುತಿಸಬೇಕಾಗಿದೆ—ಈತನ ಸುಪ್ರಸಿದ್ಧ ಕೃತಿಯಾದ 'ಆದಿಪುರಾಣಂ'ದ ಕೊನೆಗೆ ಬರುವ ಪ್ರಾರ್ಥನೆಯ ಭಾಗದಿಂದ ಕೆಲವು ವಿಚಾರಗಳನ್ನು ಇಲ್ಲಿ ನವಮೂದಿಸಲು ಮತ್ತು ಅದರ ಆಧಾರದಿಂದ ಜೈನ ಪಾರಿಭಾಷಿಕ ಕಲ್ಪನೆಗಳಲ್ಲಿ ವಿಶೇಷತೆಯನ್ನು ಗುರುತಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

೧. ತೀರ್ಥಂಕರರ ಪ್ರತಿಮೆಗಳ ರಚನೆಯಲ್ಲಿ 'ಪಂಚವರ್ಣಗಳು' ಮುಖ್ಯವಾಗಿವೆ.

೨. ಪಂಪ ಕವಿಯು ವಿಶೇಷವಾಗಿ ಪ್ರಾರ್ಥಿಸುವ "ಮಾಣಿಕ್ಯ ಜಿನೇಶಂ' ಎಂಬ ವಿಷಯದಲ್ಲಿ ಪಂಪನ ಬಗ್ಗೆ ಇದುವರೆಗೂ ಬಿಟ್ಟಿರಬಹುದಾದ ಒಂದು ಹೊಸ ವಿಚಾರವನ್ನು ಮುಂಡಿಸಲಾಗಿದೆ." ಎಂದು ಹೇಳಿದ್ದಾರೆ.

ಈ ಮೇಲಿನ ಮಾತುಗಳು ಅವರ ವಿಸ್ತಾರ ಲೇಖನದ ಮೂಲಾಂಶಗಳಾಗಿವೆ. ಅವರ ವಿಚಾರದ ಕೆಲವು ಅಭಿಪ್ರಾಯಗಳನ್ನು ಪರಿಶೀಲಿಸಲು ಇಚ್ಛೆಪಡುತ್ತೇನೆ. ಅವರು ಉದ್ಧರಿಸಿರುವ ಪಂಪನ ಗದ್ಯವನ್ನು ಮೊದಲು ಗಮನಿಸುವ:-

ವ || ಅಂತು ತನ್ನನಮಾಡಿಸಿದ ಚೈತ್ಯಾಲಯಂಗಳೊಳಾದಿಭಟ್ಟಾರಕರಾದಿಯಾಗೆ ಭವಿಷ್ಯತ್ತೀರ್ಥಂಕರರ ಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ ಮಾಣಿಕ್ಯ ದೇವರೆಂದು ಕೊಂಡಾಡಿ .... ....... ಇತ್ಯಾದಿ (ಆ ೧೬. ಪದ್ಯ ೧ ರ ವಚನ).

ಎಂದರೆ ಭರತ ಚಕ್ರವರ್ತಿಯು ಚೈತ್ಯಾಲಯಗಳನ್ನು ಕಟ್ಟಿಸಿ, ಅವುಗಳಲ್ಲಿ ಆದಿತೀರ್ಥಂಕರರೇ ಮೊದಲಾದ ೨೪ ತೀರ್ಥಂಕರರ ಪ್ರತಿಬಿಂಬಗಳನ್ನು ಪಂಚರತ್ನಗಳಿಂದ ಮಾಡಿಸಿ, ಪ್ರತಿಷ್ಠಾಪಿಸಿ ಅವರನ್ನೆಲ್ಲ ಮಾಣಿಕ್ಯದೇವರೆಂದು ಕೊಂಡಾಡಿದ್ದಾನೆ. ಅಲ್ಲದೆ ಮೂರನೇ ಪದ್ಯದಿಂದ ಮೊದಲಾಗಿ ಹತ್ತನೇ ಪದ್ಯದಲ್ಲಿ ಮುಗಿತಾಯವಾಗಿರುವ 'ಮಾಣಿಕ್ಯಜಿನಸ್ತವಾವಳಿ'ಯಲ್ಲಿನ ಎಂಟು ಪದ್ಯಗಳಲ್ಲೂ

ಮಾಣಿಕ್ಯ ಭಟ್ಟಾರಕ (೩, ೯ನೇ ಪದ್ಯಗಳು)
ಮಾಣಿಕ್ಯ ಜಿನೇಂದ್ರಬಿಂಬ (೪, ೫ನೇ ಪದ್ಯಗಳು)
ಮಾಣಿಕ್ಯ ದೇವಂ (೬, ೭, ೮ ನೇ ಪದ್ಯಗಳು)
ಮಾಣಿಕ್ಯಜಿನಸ್ತವ (೧೦ನೇ ಪದ್ಯ)

ಎಂಬುದಾಗಿ ಹೇಳಲಾಗಿದೆ. ಈ ಏಳೂ ಪದ್ಯಗಳಿಂದ (೧೦ ನೇ ಪದ್ಯವನ್ನು ಬಿಟ್ಟು) ಪದ್ಮಪ್ರಭ ತೀರ್ಥಂಕರರನ್ನು ಮಾತ್ರವೇ ಸ್ತುತಿಸಿಲ್ಲವೆಂಬುದನ್ನು ಒಪ್ಪಿಕೊಳ್ಳಬೇಕು. ಏಕೆಂದರೆ ಪಂಪನೇ ಹೇಳಿರುವಂತೆ–೨೪ ತೀರ್ಥಂಕರರ ಪ್ರತಿಬಿಂಬಗಳನ್ನು ಪಂಚರತ್ನಗಳಿಂದ ಮಾಡಿಸಿ, ಅವರನ್ನೆಲ್ಲ ಮಾಣಿಕ್ಯದೇವರೆಂದು ಕೊಂಡಾಡಿ, ಅನಂತರ–ಅಂತರ್ಚಿಸಿ ನಿರ್ಭರ ಪ್ರಣಮಾಂಜಳಿ ಪ್ರಣಯೀ ಪ್ರೀಣಿತೋತ್ತಮಾಂಗನಾಗಿ 'ಮಾಣಿಕ್ಯಜಿನ ಸ್ತವಾವಳಿ' ಎನ್ನುವ ಹೆಸರಿನಲ್ಲಿ ಸ್ತುತಿಸಿದ್ದಾನೆ. ಎಂದಮೇಲೆ ಇಲ್ಲಿ ಪದ್ಮಪ್ರಭ ತೀರ್ಥಂಕರರನ್ನು ವಿಶೇಷವಾಗಿ ಸ್ತುತಿಸಿಲ್ಲವೆಂಬುದು ಸ್ಪಷ್ಟವಾಗಿದೆ.

"ಮಾಣಿಕ್ಯಜಿನೇಂದ್ರನು ಈತನ ಆಧ್ಯಾತ್ಮಿಕವೂ ಕುಲದೈವವೂ ಆಗಿದ್ದಿರಬೇಕೆಂದು ಖಚಿತವಾದೀತು. ಆದುದರಿಂದ 'ಪಂಪ'ನ ಹುಟ್ಟು ಹೆಸರು ತೀರ್ಥಂಕರನಾಗಿದ್ದಿರಬಹುದು. 'ಪದ್ಮಪ್ರಭ' ಎಂದೇ ಇದ್ದಿರಬಹುದು" ಎಂಬ ಇವರ ಮಾತುಗಳು ಬಹು ಜೋಕೆಯಿಂದ ಕೂಡಿದುದಾಗಿದೆ.

ಪದ್ಮಪ್ರಭತೀರ್ಥಂಕರನು ಪಂಚರತ್ನಗಳಲ್ಲಿ ಒಂದಾದ 'ಮಾಣಿಕ್ಯ'ದಿಂದಲೇ ಮಾಡಲ್ಪಟ್ಟವನಾಗಿರುವನೆಂದು ಜೈನಾಗಮಗಳ ಆಧಾರಗಳ ಮೂಲಕ ತಿಳಿಸಿದ್ದಾರೆ. ಅವುಗಳಲ್ಲಿ ದಿಗಂಬರ ಜೈನಾಚಾರ್ಯವರ್ಯ ಶ್ರೀ ಮನ್ಮಾಘನಂದ್ಯಾಚಾರ್ಯರ 'ಶಾಸ್ತ್ರಸಾರ ಸಮುಚ್ಚಯಂ' ಮತ್ತು ಮೂಡಬಿದ್ರೆ(ದ. ಕ) ಯ. ಈ ಬಸದಿಯ ಇಂದ್ರರು ಸಿಂಹಸೇನೇಂದ್ರರು ಹೇಳಿರುವ ಜೈನಶಿಲ್ಪ ಪದ್ಧತಿಯ ಶ್ಲೋಕಗಳು. ಒಟ್ಟಿನಲ್ಲಿ ಇವರು ಜೈನಾಗಮಗಳ ಅನುಸಾರವಾಗಿಯೂ ಹಾಗೂ ವೈಜ್ಞಾನಿಕವಾಗಿಯೂ ವಿದ್ವತ್ಪೂರ್ಣವಾಗಿ ತಮ್ಮ ವಿಚಾರವನ್ನು ಮಂಡಿಸಿದ್ದಾರೆ.

"ಅವರೂ ಈತನು ತನ್ನ ಹುಟ್ಟು ಹೆಸರಿನ ಗುಟ್ಟನ್ನು ಬಿಟ್ಟುಕೊಡಲಿಲ್ಲ ಎಂಬ ಅಂಶವು ಉಳಿದೇ ಉಳಿಯುತ್ತದೆ" ಎಂದು ಹೇಳಿರುವ ಇವರ ಮಾತು ನಿಜವಾದ ಸಂಶೋಧಕನ ಮಾತೇ ಆಗಿದೆ. ಇದನ್ನು ಯಾರೇ ಅವರೂ ಮೆಚ್ಚಲೇಬೇಕು.

೨

ಪಂಪ ಕವಿಯು ತೀರ್ಥಂಕರರನ್ನು ಒಟ್ಟಾರೆ ಮಾಣಿಕ್ಯದೇವರೆಂದು ಕೊಂಡಾಡಿದ್ದಾನೆ. 'ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ' ಎಂದು ಸ್ಪಷ್ಟವಾಗಿ ಪಂಪನು ತಿಳಿಸಿರುವುದರಿಂದ, ಆದಿಪುರಾಣದಲ್ಲಿ ಜೈನಾಗಮವನ್ನು ತಿಳಿಸುವುದೇ ಅವನ ಗುರಿ. ಆದುದರಿಂದಲೇ ಆದಿಪುರಾಣದ ಕೊನೆಯ ಭಾಗದಲ್ಲಿ "........... ಸಂಸಾರ ಸಾರೋದಯ ವಿರಚಿತದೊಳ್ ವಾಗ್ವಧೂಮುದ್ರೆಯೊಳ್ ಮುದ್ರಿಸಿ ನಿಂದತ್ತು ಆದಿ ತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯ ಕೋಶಂ" ಎಂದು ಹೇಳಿರುವುದು ಗಮನಾರ್ಹವಾದುದು. ಇವನು ರಚಿಸಿರುವ ಆದಿಪುರಾಣವು ಜೈನಧರ್ಮಕ್ಕೆ 'ವಾಕ್ಯ ಮಾಣಿಕ್ಯ ಕೋಶ'ವೇ ಆಗಿದೆ ಎಂಬುದಂತೂ ಖಚಿತವಾದ ಅಭಿಪ್ರಾಯವಾಗಿದೆ. ಈ ಎರಡು ಎಡೆಯಲ್ಲಿ 'ಮಾಣಿಕ್ಯ' ಶಬ್ದವನ್ನು ಪಂಪನು ಉದ್ದೇಶಪೂರ್ವಕವಾಗಿಯೇ ಬಳಸಿದ್ದಾನೆ ಎಂಬುದು ವಿಚಾರಾರ್ಹವಾದ ಅಂಶವಾಗಿದೆ. ಇಲ್ಲಿ 'ಮಾಣಿಕ್ಯ'ವು ಗುಣವಾಚಿಯಾಗಿದೆ. ಮಾಣಿಕ್ಯದಲ್ಲಿ ಒಂದು ವಿಶೇಷವಾದ ಗುಣವಿದೆ. ಅದು ಕೆಂಪು ಬಣ್ಣವುಳ್ಳುದಾದರೂ, ಸ್ವಯಂಪ್ರಕಾಶಿತ ವಸ್ತು. ಬೆಳಕನ್ನು ಕೊಡುವ ವಸ್ತುವಾದ್ದರಿಂದ ಇದು ಶ್ರೇಷ್ಠ. 'ಮಾಣಿಕ್ಯಜಿನೇಂದ್ರ' ಎನ್ನುವಲ್ಲಿ ತೀರ್ಥಂಕರರು ಸ್ವಯಂ ಜ್ಞಾನಿಗಳು. ಜ್ಞಾನವೆಂಬ ಬೆಳಕನ್ನು ಕೊಡುವವರು. ಸಮವಸರಣದಲ್ಲಿ ಜ್ಞಾನೋಪದೇಶವನ್ನು ಮಾಡುವವರಾದ್ದರಿಂದ ಮಾಣಿಕ್ಯವೆಂಬ ಮಾತು ಅವರಿಗೆ ಉಚಿತವೆನಿಸುತ್ತದೆ. ಪರಮ ಪವಿತ್ರತೆಗೂ ಈ ಮಾತು ಅನ್ವಯಿಸುತ್ತದೆ. ಆದುದರಿಂದಲೇ ಪಂಪನಿಗೆ 'ಮಾಣಿಕ್ಯ'ವು ಅಪೇಕ್ಷಣೀಯವಾದುದಾಗಿರಬಹುದು. ಈ ನಿಲವಿನಲ್ಲಿ ವಿಚಾರ ಮಾಡಿದಾಗ ಜಿನರನ್ನು 'ಮಾಣಿಕ್ಯಜಿನೇಂದ್ರ'ರೆಂದೂ, ತನ್ನ ಕೃತಿಯಾದ ಆದಿಪುರಾಣವನ್ನು 'ವಾಕ್ಯಮಾಣಿಕ್ಯ ಕೋಶ'ವೆಂದೂ ಕರೆದಿರುವುದು ಸಾರ್ಥಕವಾಗಿದೆ.

ಪಂಪನನ್ನು ಕುರಿತು ದಿ|| ಮುಳಿಯ ತಿಮ್ಮಪ್ಪಯ್ಯನವರು "ನಮ್ಮ ಕವಿಯ ಅಂಕಿತನಾಮವು 'ಪದ್ಮಪ' (ಪದ್ಮ+ಅಪ್ಪ) ಎಂದು ಇದ್ದಿರಬೇಕು. ಅದು ಮನೆಯವರ ಪ್ರೇಮದ ಆಡುಮಾತಿನಲ್ಲಿ 'ಪಂಪ' ಎಂದು ಮತ್ತೆ ಮಾರ್ಪಟ್ಟಿರಬೇಕು. 'ಗಣಪ' ಎಂಬುದು 'ಗಂಪ' ಅಲ್ಲವೆ 'ಕಂಪ' ಎಂದಾದಂತೆ ಈ ಪದವು ಪದ್ಮಪ–ಪಮ್ಮಪ–ಪಪ್ಪ ಈ ದಾರಿವಿಡಿದು 'ಪಂಪ' ಎಂದು ನೆಲೆಗೊಂಡಿರಬೇಕು" ಎಂದು 'ಪಂಪ ಮಹಾಕವಿ ಲಕ್ಷ್ಮೇಶ್ವರ 1951' ಎಂಬ ಗ್ರಂಥದಲ್ಲಿನ ಮುಳಿಯ ತಿಮ್ಮಪ್ಪಯ್ಯನವರ ಲೇಖನವು ಹೇಳುತ್ತದೆ. ಇದು ಭಾಷಾಶಾಸ್ತ್ರದ ದೃಷ್ಟಿಯಿಂದಲೂ ಸಮಂಜಸವಾದುದಲ್ಲ. ಏಕೆಂದರೆ ಈ ರೂಢಿಯ ಪ್ರಯೋಗಗಳಿಗೆ ಆಧಾರಗಳು ಸಮಕಾಲಿಕ ಅಂದರೆ ಪಂಪನ ಕಾಲದವಾಗಿರಲಾರವು. ಈಗಿನ ಪ್ರಯೋಗಗಳನ್ನು 10ನೇ ಶತಮಾನಕ್ಕೆ ತಳ್ಳುವುದು ಸರಿಯಾಗಲಾರದು–ಎಂದು ಹೇಳಿರುವ ಶ್ರೀರಾಜಗೋಪಾಲರು ಮುಳಿಯತಿಮ್ಮಪ್ಪಯ್ಯನವರ ವಾದವನ್ನು ಭಾಷಾಶಾಸ್ತ್ರದ ಆಧಾರದ ಮೇಲೆ ಒಪ್ಪಿಲ್ಲ.

ಪದ್ಮಪ > ಪಮ್ಮಪ > ಪಮ್ಪ(ಪಂಪ) ಇದು ಮುಳಿಯ ತಿಮ್ಮಪ್ಪಯ್ಯನವರ ಊಹೆ.

ಪದ್ಮಪ್ರಭ > ಪಂಪ ಇದು ಶ್ರೀರಾಜಗೋಪಾಲರ ಊಹೆ. ಮುಳಿಯ ತಿಮ್ಮಪ್ಪಯ್ಯನವರ ಊಹೆಯನ್ನು ಭಾಷಾಶಾಸ್ತ್ರದ ಆಧಾರದ ಮೇಲೆ ಒಪ್ಪಲು ಸಾಧ್ಯ ವಿಲ್ಲವೆನ್ನುವುದಾದರೆ, ಶ್ರೀ ರಾಜಗೋಪಾಲರ ಊಹೆಯೂ ಜಳ್ಳಾಗುತ್ತದೆ.

ದೀರ್ಘವಾದ ಅಂಕಿತನಾಮವನ್ನು ತುಂಬ ಚಿಕ್ಕದಾಗಿ ಮಾಡಿಕೊಳ್ಳುವ ಪ್ರವೃತ್ತಿ ಮಾನವನಿಗೆ ಸಹಜವಾದುದು. ಆದುದರಿಂದ 'ಈಗಿನ ರೂಢಿಯ ಪ್ರಯೋಗಗಳನ್ನು 10ನೇ ಶತಮಾನಕ್ಕೆ ತಳ್ಳುವುದು ಸರಿಯಾಗಲಾರದು' ಎಂಬ ಶ್ರೀ ರಾಜಗೋಪಾಲರ ಅಭಿಪ್ರಾಯವನ್ನು ಒಪ್ಪಲು ಸಾಧ್ಯವಿಲ್ಲ.

"ಪಂಪ ಪದದ ನಿರ್ವಚನ-ಪಂಪಕವಿಯಿಂದಲೇ (ಆತನ ಕೃತಿಗಳಿಂದ ಮತ್ತು ಶಾಸನಗಳಿಂದ) ಗುರುತು ಹತ್ತಿದ ಈ ಪದವು ಮೂಲತಹ ಕನ್ನಡವಾಗಿರಲಾರದು. ಕನ್ನಡವೂ ಅಲ್ಲದ ಸಂಸ್ಕೃತವೂ ಅಲ್ಲದ ಒಬ್ಬ ಕವಿಯ ಅತ್ಯಂತ ಆತ್ಮೀಯ ಪದವಾದ ಈ ಪಂಪ ಎಂಬುದಕ್ಕೆ ಗುರುಮುಖೇನ ಬಂದಿರುವಾಗಲೂ ಇದು ಅರ್ಧಮಾಗಧಿಯ ಪದ ವಾಗಿರಲೂ ಸಾಕು" ಎನ್ನುವ ಇವರ ಅಭಿಪ್ರಾಯವನ್ನು ಒಪ್ಪಲು ಸಾಧ್ಯವಿಲ್ಲ. (ತಮ್ಮ ಅಭಿಪ್ರಾಯವನ್ನು ಸಮರ್ಥಿಸಲು ಪಣ್ಣಾಇಂ ಸುತ್ತಾಇಂ ಎಂಬ ಅರ್ಧ ಮಾಗಧಿಯ ಕೃತಿಯಲ್ಲಿನ ಬ್ರಹ್ಮ > ಬಂಭ ಎಂಬುದಾಗಿ ಆಧಾರ ತೆಗೆದುಕೊಂಡಿರುತ್ತಾರೆ.)

ಮಾನ್ಯ ರಾಜಗೋಪಾಲರು ಪದ್ಮಪ್ರಭ ತೀರ್ಥಂಕರನನ್ನೇ "ಮಾಣಿಕ್ಯಜಿನ" ನೆಂದು ಸ್ಥಾಪಿಸಲು ಬಹಳ ಪ್ರಯಾಸ ಪಟ್ಟು ಪ್ರಯತ್ನಿಸಿದ್ದಾರೆ. ಆದರೂ ಅವರ ಶ್ರಮ ವ್ಯರ್ಥವಾಗಿರುತ್ತದೆ. ಏಕೆಂದರೆ ಆದಿತೀರ್ಥಂಕರರಿಗೆ ಹಲವಾರು ಹೆಸರುಗಳಿವೆ. ಪುರುಪರಮೇಶ್ವರ, ಪರಮೇಶ್ವರ, ಆದೀಶ್ವರ, ಆದಿನಾಥ, ಋಷಭನಾಥ, ಋಷಭದೇವ ಮಾಣಿಕ್ಯಸ್ವಾಮಿ........ ಇತ್ಯಾದಿಗಳು (ಇನ್ನೂ ಇರಬಹುದು). ಇವುಗಳ ಜೊತೆಗೆ, ಕೆಲವು ಪ್ರಸಿದ್ಧ ವ್ಯಕ್ತಿಗಳು ತಮ್ಮ ಬಿರುದನ್ನು ತಮ್ಮ ಇಷ್ಟದೇವರಿಗೆ ಆರೋಪಿಸಿ ಆ ಬಿರುದಿನಿಂದಲೇ ಆ ದೇವರನ್ನು ಪ್ರತಿಷ್ಠಾಪಿಸಿ ಪ್ರಸಿದ್ಧಿಗೈದಿರುತ್ತಾರೆ. ಕ್ರಿ. ಶ. 1125ರ ಮೊದಲಿಗೆ ನಿಂಬಸಾಮಂತನೆಂಬುವನು ಕೊಲ್ಲಾಪುರದಲ್ಲಿ ಒಂದು ಬಸದಿಯನ್ನು ಕಟ್ಟಿಸಿ ರುತ್ತಾನೆ. ಈ ಬಸದಿಯು ಆದಿನಾಥ ಸ್ವಾಮಿಯದು. ಈ ಸ್ವಾಮಿಗೆ "ರೂಪ ನಾರಾಯಣ ದೇವನಾದಿಜಿನ" ಎಂದು ಕರೆದಿದ್ದಾನೆ. ಇಲ್ಲಿ 'ರೂಪ ನಾರಾಯಣದೇವ' ಎಂಬುದು ನಿಂಬ ಸಾಮಂತನ ಬಿರುದು. ಎಂದ ಮೇಲೆ ರೂಪನಾರಾಯಣ ಬಸದಿ ಎಂಬುದು ಆದಿಜಿನಸ್ವಾಮಿ ಬಸದಿ ಎಂಬುದು ಸ್ಪಷ್ಟ. ನಂಜನಗೂಡು ತಾಲೂಕು ಹುಲ್ಲುಹಳ್ಳಿಯಲ್ಲಿ ಒಂದು ಬಸದಿಯಿತ್ತು. ಅದು 'ಮಾಣಿಕ್ಯಸ್ವಾಮಿ ಬಸದಿ' ಎಂದೇ ಪ್ರಸಿದ್ಧಿಯಾಗಿತ್ತು. ಹುಲ್ಲುಹಳ್ಳಿಯ ಶಾಸನದಲ್ಲಿ ಈ ಅಂಶವು ಖಚಿತವಾಗಿ ತಿಳಿದು ಬರುತ್ತದೆ. "............ತ್ರಿಜಗನ್ಮಂಡಲಮೆಂಬುತ್ತುಂಗ ಚೈತ್ಯಾಲಯ ಚಿಂತಾಮಣಿ

ಪ್ರತಿಷ್ಠಿತಮಪ್ಪ ಮಾಣಿಕ್ಯ ದೇವರ ಪ್ರತಿಷ್ಠೆಯುಂ ಪುರಾತನ ಭವ್ಯ ಜನ ಪ್ರತಿಷ್ಠಿತಮಪ್ಪ ಆ ಪರಮೇಶ್ವರ ಚೈತ್ಯಾಲಯಮಂ ಜೀರ್ಣೋದ್ಧಾರಮಂ ಮಾಡಿಸಿ.............. ಮಾಣಿಕ್ಯದೇವರ ಬಸದಿಗೆ......................" ಈ ಶಾಸನದಲ್ಲಿ ತಿಳಿದು ಬರುವ ಮಾಣಿಕ್ಯದೇವರು ಮತ್ತಾರು ಅಲ್ಲ. ಆದಿತೀರ್ಥಂಕರರೇ ಆಗಿರುತ್ತಾರೆ.

'ಮಾಣಿಕ್ಯ ಸ್ವಾಮಿ' ಎಂದರೆ ಆದಿತೀರ್ಥಂಕರನೆಂಬುದಕ್ಕೆ ಮತ್ತೊಂದು ನಿದರ್ಶನ ವನ್ನು ಕೊಡಬಹುದು. ಕವಿ ನಾಗನ ವಿರಚಿತ "ಮಾಣಿಕ ಸ್ವಾಮಿ ಚರಿತ್ರೆ" ಎನ್ನುವ ಕಾವ್ಯ ಮೈಸೂರು ವಿಶ್ವವಿದ್ಯಾಲಯದಲ್ಲಿ ಪ್ರಕಟವಾಗಿದೆ.[1] ಮಾಣಿಕ್ಯದ ಮತ್ತೊಂದು ರೂಪವೇ 'ಮಾಣಿಕ'. ಸುಮಾರು 11ನೇ ಶತಮಾನದಲ್ಲಿ ಕೊಲ್ಲಾಪುರದಲ್ಲಿ ಮಾಣಿಕ ಸ್ವಾಮಿಯನ್ನು ಪ್ರತಿಷ್ಠೆ ಮಾಡಿದ ವಿಷಯವೇ ಈ ಕಾವ್ಯದ ವಸ್ತು. ಆದುದರಿಂದ "ಮಾಣಿಕ್ಯಜಿನ, ಮಾಣಿಕ್ಯಸ್ವಾಮಿ ಎನ್ನುವ ಮಾತುಗಳು ಆದಿತೀರ್ಥಂಕರನಿಗೇ ಅನ್ವ ಯಿಸುತ್ತವೆ. ಅಲ್ಲದೆ ತನ್ನ ಇಷ್ಟದೈವವು ಆದಿನಾಥ ಸ್ವಾಮಿಯೇ ಆಗಿದ್ದುದರಿಂದ ಪಂಪನು ಆದಿಪುರಾಣವನ್ನು ಬರೆದು ತನ್ನ ಭಕ್ತಿನಿಷ್ಠೆಯನ್ನು ತೋರಿಸಿಕೊಂಡಿದ್ದಾನೆ.

೩

'ಪಂಪ' ಪದದ ಬಗೆಗೆ ಕನ್ನಡ ಮತ್ತು ಸಂಸ್ಕೃತದ ಮೂಲದಿಂದಲೇ ಅರಸುವುದು ಸೂಕ್ತವೆನಿಸುತ್ತದೆ. 'ಪಂಪಾ' ಎನ್ನುವ ಹೆಸರು ವಾಲ್ಮೀಕಿ ರಾಮಾಯಣದಲ್ಲಿ ಮೊದಲು ಕಂಡುಬರುತ್ತದೆ. ಋಷ್ಯಮೂಕ ಪರ್ವತದ ಬಳಿಯಿರುವ ಸರೋವರವೇ "ಪಂಪಾ ಸರೋವರ". ಈ ಪಂಪಾಸರೋವರದಲ್ಲಿನ 'ಪಂಪಾ' ಪದವು ವಾಲ್ಮೀಕಿ ಯಿಂದ ಸೃಷ್ಟಿಯಾದುದಲ್ಲ. ಅದು ವಾಲ್ಮೀಕಿಗಿಂತ ಮೊದಲೇ ಇತ್ತು. ಆದ್ದರಿಂದಲೇ ಅದನ್ನು ತನ್ನ ಕಾವ್ಯದಲ್ಲಿ ಹೇಳಿದ್ದಾನೆ. ಎಂದಮೇಲೆ ಪಂಪನಿಗಿಂತಲೂ ಬಹು ಹಿಂದೆ ಈ ಹೆಸರು ಇದ್ದುದಂತು ನಿಶ್ಚಯ. ಪವಿತ್ರವಾದ 'ಕಾಶಿ'ಯನ್ನು ಕಾಶಿಕ್ಷೇತ್ರವೆಂದೂ, ಆ ಕ್ಷೇತ್ರದ ಅಧಿಪತಿಯಾದ ವಿಶ್ವೇಶ್ವರನನ್ನು 'ಕಾಶೀನಾಥ' ಇಲ್ಲವೆ 'ಕಾಶೀಪತಿ' ಎಂದೂ ಕರೆಯುವುದು ರೂಢಿಯಲ್ಲಿದೆ. ಇದರಂತೆಯೇ 'ಪಂಪೆ'ಯು ಪಂಪಾಕ್ಷೇತ್ರವಾಗಿ,ವಿರೂ- ಪಾಕ್ಷಸ್ವಾಮಿಯನ್ನು 'ಪಂಪಾನಾಥ' ಇಲ್ಲವೇ 'ಪಂಪಾಪತಿ' ಎಂದು ಕರೆಯುವುದು ರೂಢಿಯಲ್ಲಿದೆ. ಆದುದರಿಂದ 'ಪಂಪೆ'ಯು ಒಂದು ಕ್ಷೇತ್ರದ ಹೆಸರಾಗಿದೆ ಎಂಬುದರಲ್ಲಿ ಸಂಶಯವಿಲ್ಲ. "ಪಂಪಾಪುರದರಸ ವಿರೂಪಾಕ್ಷ" ಎಂದು ಹೇಳಿರುವ ಹರಿಹರ ಕವಿಯ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಇದರಿಂದ 'ಪಂಪೆ' ಅಥವಾ 'ಪಂಪಾ'ವು ಒಂದು ಕ್ಷೇತ್ರದ ಹೆಸರು ಎಂಬುದು ಸಿದ್ಧವಾಗುತ್ತದೆ. ೧೦೫೭ರ ಒಂದು ಶಾಸನದಲ್ಲಿ ಈ ಕ್ಷೇತ್ರದ ಹೆಸರು ಕಂಡುಬರುತ್ತದೆ.

---

1. ಮಾಣಿಕ ಸ್ವಾಮಿ ಚರಿತ್ರೆ, ಸಂ ಜಿ. ಜಿ. ಮಂಜುನಾಥನ್, ಕನ್ನಡ ಅಧ್ಯಯನ ಸಂಸ್ಥೆ. ಮೈಸೂರು ವಿಶ್ವವಿದ್ಯಾಲಯ.

" ...........ಆದಿತ್ಯವಾರ ಸೂರ್ಯಗ್ರಹಣದಂದು ಪಂಪೆಯ ತೀರ್ಥದಲು ಶ್ರೀರಾಜಧಾನಿ ವಿಕ್ರಮ ಪುರದ ಬ್ರಹ್ಮಪುರಿಯ ನಂದಿಯಣ್ಣ ಷಡಂಗಿ ಭಟ್ಟೋಪಾಧ್ಯಾಯರು ಪ್ರಮುಖ ನಾಲ್ವತ್ತಿರ್ವರು ವಿದ್ವಾಂಸರಪ್ಪ ಮಹಾಜನಕ್ಕೆ ..................."
ಸೌಇಇ XI—I, ೮೮—೬)

ಹಾಗಾದರೆ 'ಪಂಪೆ'ಯು 'ಪಂಪಾ' ಆಗಲು ಕಾರಣವೇನು ಎಂಬ ಪ್ರಶ್ನೆಗೆ ಉತ್ತರವೂ ಸುಲಭವಿದೆ. 'ಪಂಪೆ' ಪದವು ದ್ರಾವಿಡ ಭಾಷೆಗೆ ಸೇರಿದ ಪದ. ಇದು ಸಂಸ್ಕೃತೀಕರಣಗೊಂಡಾಗ ಪಂಪಃ, ಪಂಪಾ (ಪುಲ್ಲಿಂಗ, ಸ್ತ್ರೀಲಿಂಗ) ಶಬ್ದಗಳಾಗಲೇ ಬೇಕು. 'ಪಂಪ'ಕ್ಕೂ 'ಪಂಪೆ'ಗೂ ಸಂಬಂಧವೆಲ್ಲಿಯದು ಎಂಬ ಪ್ರಶ್ನೆ ತಲೆ ಎತ್ತುವುದು ಸಹಜ. ಒಂದು ಪುಣ್ಯಕ್ಷೇತ್ರದ ಹೆಸರನ್ನು ತಮ್ಮ ಅಂಕಿತನಾಮ (ಹೆಸರನ್ನಾಗಿ)ವನ್ನಾಗಿ ಬಳಸಿಕೊಂಡಿರುವ ನಿದರ್ಶನಗಳು ಬಹಳಷ್ಟು ಇವೆ. ತಿರುಪತಿಯ ವೆಂಕಟೇಶ್ವರನ ಭಕ್ತರು 'ವೆಂಕಟಗಿರಿ', 'ವೆಂಕಟಾದ್ರಿ' ಎಂಬ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ. ಹೀಗೆಯೇ ಬಿಳಿಗಿರಿ, ರಜತಾದ್ರಿ, ಹೇಮಾದ್ರಿ, ಅನಂತನಾಗ್, ಶಂಕರನಾರಾಯಣ, ಸುಬ್ರಹ್ಮಣ್ಯ, ಗೋಕಾಕ್ ಎನ್ನುವ ಹೆಸರುಗಳು ತೀರ ಪರಿಚಿತವಾಗಿವೆ. ಇವುಗಳೆಲ್ಲವೂಕ್ಷೇತ್ರದ ಹೆಸರುಗಳೇ ಆಗಿರುತ್ತವೆ. ಈ ನಿಟ್ಟಿನಲ್ಲಿ ವಿಚಾರ ಮಾಡಿದಾಗರ 'ಪಂಪ' ಎನ್ನುವ ಹೆಸರಿನಲ್ಲಿ 'ಪಂಪಾಕ್ಷೇತ್ರ'ವು ಅಡಗಿದೆ ಎಂದು ಹೇಳುವುದು ಸಾಧುವೆನಿಸುತ್ತದೆ.

'ಪಂಪ' ಎನ್ನುವ ಹೆಸರು ಪಂಪಕವಿಯೊಬ್ಬನ ಹೆಸರೇ ಆಗಿದೆಯಲ್ಲ. ಇನ್ನಾರು ಈ ಹೆಸರನ್ನು ಇಟ್ಟುಕೊಳ್ಳಲಿಲ್ಲವೇ ಎನ್ನುವ ಮತ್ತೊಂದು ಪ್ರಶ್ನೆ ಸಿದ್ಧವಾಗುತ್ತದೆ. ಅಪರೂಪವಾಗಿ 'ಪಂಪ' ಎನ್ನುವ ಹೆಸರುಳ್ಳವರು ಸಿಕ್ಕುತ್ತಾರೆ. 'ಪಂಪ' ಎನ್ನುವ ಹೆಸರಿನವರು ಪ್ರಸಿದ್ಧರೂ, ಪ್ರಖ್ಯಾತರೂ ಆಗಿದ್ದರೆ ಮಾತ್ರ ಎಲ್ಲೆಲ್ಲೂ, ಎಲ್ಲರಿಗೂ ಪರಿಚಯವಾಗುತ್ತಾರೆ. ಆದರೆ ಜನಸಾಮಾನ್ಯರು ಈ ಹೆಸರಿನಿಂದ ಕೂಡಿದ್ದರೂ ಅವರು ನಮ್ಮ ಅರಿವಿಗೆ ಬರುವುದು ಹೇಗೆ ಸಾಧ್ಯ ? ಆದರೂ ಐತಿಹಾಸಿಕವಾಗಿ 'ಪಂಪ' ಎಂಬ ಹೆಸರುಳ್ಳವರನ್ನು ಮೊದಲು ಗಮನಿಸುವ :

೧. ರಾಷ್ಟ್ರಕೂಟರ ಮೂರನೆಯ ಕೃಷ್ಣನ ಆಳ್ವಿಕೆಗೆ ಸಂಬಂಧಿಸಿದ ಸುಮಾರು ಕ್ರಿ. ಶ. 939-966ರ ರೋಣದ ವೀರಗಲ್ಲಿನ ಶಾಸನದಲ್ಲಿ, ಪಂಪಯ್ಯನೆಂಬುವನು ರಾಷ್ಟ್ರಕೂಟರನ್ನು ವಿರೋಧಿಸಿ ಹೋರಾಡಿದ್ದನೆಂದು ಹೇಳಲಾಗಿದೆ. ಈ ಪಂಪಯ್ಯನು ವಾಜಿಕುಲದವನಾಗಿದ್ದು ಕೌಂಡಿಣ್ಯ ಗೋತ್ರಕ್ಕೆ ಸೇರಿದವನಾಗಿದ್ದಾನೆ.

೨. ....ಚಿಮ್ಮನೂರ ಮಹಾರಾಜಯ್ಯನುಂ, ಮೊಳಿಯನೂರ ದೇವಯ್ಯನುಂ, ಪಂಪಯ್ಯನುಂ..............
[ಎ. ಕ. XI ಚಿತ್ರದುರ್ಗ, ಕ್ರಿ. ಶ. 937]

೩. ........ಪಂಪಯ್ಯಂ ನಾನೊಂದಕ್ಷತೆಯನಪ್ಪಂದಮಿಾಯೆನೆನ್ದು
ತರಿಸಲಾ ಮಾನ್ಯ ದಿಟ್ಟ ಮಹಾಜನಮ ನಮಸ್ಕಾರಂಗೆಯ್ದು........
[ಸೌ ಇ ಇ XI—I ಕ್ರಿ. ಶ. 942]

೪. ........ಶ್ರೀಮಚ್ಚಾಳುಕ್ಯ ಪೆರ್ಮಾನಡಿ ದೇವರು, ತತ್ಪುತ್ರಿ
ಶ್ರೀ ಪಂಪಾದೇವಿಯವರ ರಾಜ್ಯಾಭ್ಯುದಯದಂದು............
[ಎಕ—IV ಹುಣಸೂರು. ಕ್ರಿ. ಶ. 997]

೫. ಅಘ್ಘಣಿ ಹಂಪಯ್ಯ. ಇವನೊಬ್ಬ ವಚನಕಾರ.
ವಚನದ ಅಂಕಿತ ವಿರುಪಯ್ಯ. ೧೨ನೇ ಶತಮಾನ.
(ಶಬ್ದಮಣಿದರ್ಪಣಕಾರನಿಗೂ ಮೊದಲೇ 'ಪ'ಕಾರವು 'ಹ'ಕಾರ
ವಾಗಿರುವುದನ್ನು ಇಲ್ಲಿ ಗಮನಿಸಬೇಕು.)

ಈ ಐತಿಹಾಸಿಕ ದಾಖಲೆಗಳಲ್ಲಿ ಪುರುಷರೂ ಸ್ತ್ರೀಯರೂ ಪಂಪೆಯ ಕ್ಷೇತ್ರದ (ಪಂಪಾಕ್ಷೇತ್ರದ) ಹೆಸರನ್ನು ತಮ್ಮ ಅಂಕಿತನಾಮವನ್ನಾಗಿ ಇಟ್ಟುಕೊಂಡಿರುವುದನ್ನು ಇಲ್ಲಿ ಗಮನಿಸಬೇಕು.

ಇಂದಿಗೂ ಈ ಕ್ಷೇತ್ರದ ಹೆಸರನ್ನು ಇಟ್ಟುಕೊಂಡಿರುವ ವ್ಯಕ್ತಿಗಳು ಬೆಳಕಿಗೆ ಬಂದಿದ್ದಾರೆ.

೧. ಪಂಪವ್ವ : ಇವರು ನರುಗುಂದದವರು. ಇವರ
ತಂದೆ ತಾಯಿಗಳು ಗಂಗಾಧರಪ್ಪ, ಗಂಗವ್ವ. ಈಗ
ಇವರು ಹುಬ್ಬಳ್ಳಿಯಲ್ಲಿದ್ದಾರೆ. ಇವರು
'ಶ್ರೀ ಗುರು ಬಸವಲಿಂಗೇಶನ ಭಕ್ತಿಯ ವಚನಗಳು'
ಎಂಬ ಕೃತಿಯನ್ನು ೪ ಭಾಗಗಳಲ್ಲಿ ರಚಿಸಿರುತ್ತಾರೆ.

೨. ಹಂಪಣ್ಣ : ಈತ ನನ್ನ ಸಹಪಾಠಿ.
ಮಾಧ್ಯಮಿಕ ಶಾಲೆಯಲ್ಲಿ ಅಧ್ಯಯನ ಮಾಡುತ್ತಿದ್ದ.
(ಸು 1944 ರಲ್ಲಿ ಎಂದು ನೆನಪಿದೆ) ಈತನ ಸ್ಥಳ
ಮಂಡ್ಯಾ ಜಿಲ್ಲೆ. ಮಂಡ್ಯಾ ತಾಲ್ಲೋಕು, ಅವ್ವೇರಹಳ್ಳಿ
ಇರಬಹುದು.

ಪಂಪವ್ವ, ಹಂಪಣ್ಣ ಇವರುಗಳು ವೀರಶೈವಧರ್ಮದವರಾಗಿರುತ್ತಾರೆ. ಆದುದರಿಂದ 'ಪಂಪ' ಎಂಬುದು ಸ್ಥಳವಾಚಿ (ಪಂಪೆಯ ಕ್ಷೇತ್ರ) ಯಿಂದ ನಿಷ್ಪನ್ನವಾದುದೇ ಹೊರತು ಇನ್ನಾವುದರ ತದ್ಭವವಲ್ಲ. ಇದು ಜೈನಧರ್ಮದ ಪಾರಿಭಾಷಿಕ ಶಬ್ದವೂ ಅಲ್ಲ. ಈ ಧರ್ಮಕ್ಕೆ ಅನ್ವಯಿಸುವ ನಾಮವಾಚಿಯೂ ಅಲ್ಲ. ಇದು ಒಂದುವೇಳೆ ಜೈನಧರ್ಮಕ್ಕೆ

ಸೇರಿದುದಾಗಿದ್ದಲ್ಲಿ 'ಪಂಪ' ಎನ್ನುವ ಹೆಸರಿನವರು ಈ ಸಮಯದವರಲ್ಲಿ ಅನೇಕರಿರ ಬಹುದಾಗಿತ್ತು.

ಇನ್ನು ಇದರ ಮೂಲವನ್ನು ಮೊದಲು ಸಂಸ್ಕೃತದಲ್ಲಿ ನೋಡೋಣ."ಕಾಶ ಕೃತ್ಸ್ನ ಶಬ್ದಕಲಾಪ ಧಾತುಪಾಠಃ" ಎಂಬ ಹೆಸರಿನ ವ್ಯಾಕರಣವು ಸಂಸ್ಕೃತ ವಾಙ್ಮಯದಲ್ಲಿ ಪ್ರಸಿದ್ಧವಾದುದು. ಈ ಕೃತಿಯು ಪಾಣಿನಿಯ ಅಷ್ಟಾಧ್ಯಾಯಿ ಗಿಂತಲೂ ಪ್ರಾಚೀನವಾದುದು. ಇದರಲ್ಲಿ ಬರುವ ದಶಗಣಗಳಲ್ಲಿ ಒಂದಾದ 'ಚುರಾದಿಃ' ಯಲ್ಲಿ 'ಪಪಿ' ಎಂಬುದೊಂದು ಧಾತುವಿದೆ. ಇದರ ಅರ್ಥ 'ಕ್ಷಾಂತೌ' ಎಂಬುದಾಗಿ' ಇದಕ್ಕೆ ಕನ್ನಡದಲ್ಲಿ 'ತಾಳ್ಮೆಯೊಳ್' ಎಂದು ಅರ್ಥ. ಈ ಧಾತುವಿನಿಂದ 'ಪಂಪಯತಿ' ಎಂಬುದು ನಿಷ್ಪನ್ನವಾಗುತ್ತದೆ. ಇದರ ಆಧಾರದ ಮೇಲೆ ಪಂಪಃ, ಪಂಪಕಃ, ಪಂಪನ್ ಎಂಬ ಮೂರು ಪದಗಳು ಸಾಧಿತವಾಗುತ್ತವೆ. ಈ ಮೂರೂ ಪದಗಳ ಅರ್ಥ 'ಸೈರಣೆ ವಂತಂ' ಎಂಬುದಾಗಿ ಈ ಕೃತಿಯ ಟೀಕಾಕಾರನಾದ ಚನ್ನವೀರಕವಿಯು ತಿಳಿಸುತ್ತಾನೆ. ಪ್ರಯೋಗದಲ್ಲಿ ಪಂಪಾ ಎಂಬುದಕ್ಕೆ ವಿರೂಪಾಕ್ಷ ಕ್ಷೇತ್ರಂ ಎಂದು ಹೇಳಿದ್ದಾನೆ.

ಈಗ 'ಪಂಪ' ದ ಮೂಲವನ್ನು ಕನ್ನಡದಲ್ಲಿ ನೋಡೋಣ.

೧. ಕನ್ನಡ ಸಾಹಿತ್ಯದಲ್ಲಿ ಕೆಲವಾರು ನಿಘಂಟುಗಳು ರಚಿತವಾಗಿವೆ. ಅವು ಗಳಲ್ಲಿ 'ಚತುರಾಸ್ಯ ನಿಘಂಟು' ಮತ್ತು 'ಕವಿಕಂಠಹಾರ' ಎಂಬ ನಿಘಂಟುಗಳು ಕಂದ ಪದ್ಯಗಳಿಂದ ರಚಿತವಾಗಿವೆ. ಚತುರಾಸ್ಯ ನಿಘಂಟುವಿನ ಒಂಭತ್ತನೇ ಪದ್ಯ ಮತ್ತು ಕವಿಕಂಠಹಾರದ ಐವತ್ತನಾಲ್ಕನೇ ಪದ್ಯಈ ಎರಡರಲ್ಲೂ'ಪಂಪನೆನಲ್ ಸಮಭಾಗಂ' ಎಂದು ಅರ್ಥೈಸಿರುತ್ತದೆ.

ಇದೇ 'ಪಂಪ' ಶಬ್ದವು ವ್ಯಕ್ತಿಗತವಾದಾಗ ಸಮಭಾವವುಳ್ಳವನು ಎಂದು ಅರ್ಥೈಸ ಬೇಕಾಗುತ್ತದೆ. ಈ ಶಬ್ದವು ಭಗವದ್ಗೀತೆಯಲ್ಲಿ ಹೇಳಿರುವ 'ಸ್ಥಿತಧೀಃ' ಎಂದರೆ 'ಸ್ಥಿತ ಪ್ರಜ್ಞ' ಎಂಬುದಕ್ಕೆ ಸಮಾನವಾಗುತ್ತದೆ.

೨. ಕನ್ನಡ ಭಾಷೆಯಲ್ಲಿ ಕೆಂ(ಕೆನ್), ಪಂ (ಪನ್), ಬೆಂ, ಎಂಬುವೇ ಮೊದಲಾದ ಗುಣವಾಚಿಗಳಿವೆ.

'ಕೆಂ' ಎಂದರೆ ಕೆಂಪಾದ ಲಕ್ಷಣವಾದ ಎಂಬ ಅರ್ಥಗಳಿವೆ.
'ಪಂ' ಎಂದರೆ ಹಸಿಯಾದ, ಆರ್ದ್ರವಾದ, ಹಸಿರಾದ, ಹಸಿರು ಬಣ್ಣದ, ಮೃದುವಾದ ಎಂಬ ಅರ್ಥಗಳಿವೆ.

'ಬೆಂ' ಎಂದರೆ ಬಿಸುಪಾದ, ಬೆಚ್ಚನೆಯ, ಕೋಪ ಎಂಬ ಅರ್ಥಗಳಿವೆ. ಮೊದಲ ಎರಡಕ್ಕೆ (ಕೆಂ, ಪಂ) 'ಪ' ಕಾರವು ಸೇರಿ ನಾಮವಾಚಕ (ಪುಲ್ಲಿಂಗ)ವಾಗಿ ಕೆಂಪ, ಪಂಪ ಆಗುತ್ತದೆ. ಇಲ್ಲಿ ಪಂಪನೆಂದರೆ ಕರುಣೆಯುಳ್ಳವನು, ಹರಿತವರ್ಣದವನು, ಮೃದು

ಸ್ವಭಾವದವನು ಎಂದಾಗುತ್ತದೆ. (ದುರ್ಗಸಿಂಹನ ಪಂಚತಂತ್ರದಲ್ಲಿ ಬಳಸಿರುವ 'ಕರುಣಾ ರಸಾದ್ರ್ರ ಹೃದಯಂ" ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.)

ಪಂಪ ಕವಿಯು ತನ್ನ ವರ್ಣಿಸಿಕೊಂಡಿರುವ ಆದಿಪುರಾಣದ ಒಂದು ಪದ್ಯವನ್ನು ಈಗ ಉದಾಹರಿಸುವುದು ಸೂಕ್ತವಾಗಿದೆ. ಅದು :

ಕದಲೀಗರ್ಭಶ್ಯಾಮಂ
ಮೃದುಕುಟಿಲ ಶಿರೋರುಹಂ ಸರೋರುಹವದನಂ
ಮೃದುಮಧ್ಯಮತನು ಹಿತಮಿತ
ಮೃದುವಚನಂ ಲಲಿತ ಮಧುರ ಸುಂದರವೇಷಂ

ನಿಜಕ್ಕೂ 'ಪಂಪ'ದ ಅರ್ಥವನ್ನು ಈ ಪದ್ಯದಲ್ಲಿ ಪಂಪನು ಎಷ್ಟು ಚನ್ನಾಗಿ ಗೋಪ್ಯ ವಾಗಿ ಇಟ್ಟಿದ್ದಾನೆ ಎಂಬುದು ಅಚ್ಚರಿಯಾಗಿದೆ.

೪

ಪಂಪ ಕವಿಗೆ 'ಪಂಪ' ಎಂಬ ಹೆಸರು ಬರಲು ಕಾರಣವೇನು ಎಂಬುದನ್ನು ಕುರಿತು ಇನ್ನು ವಿಚಾರಮಾಡಬಹುದು. ಪಂಪನು ಜೈನನಾದರೂ ಅವನ ಪೂರ್ವಜರು ವೈದಿಕ ಬ್ರಾಹ್ಮಣರಾಗಿದ್ದರು. ಇವನ ಪ್ರಪ್ರಪಿತಾಮಹನಾದ ಮಾಧವ ಸೋಮ ಯಾಜಿಯು ಸಕಲ ಶಾಸ್ತ್ರಾರ್ಥ ಪ್ರವೀಣನಾಗಿ, ಅನೇಕ ಯಜ್ಞಗಳನ್ನು ಮಾಡಿ "ಆ ಸಮುದ್ರಂಬರೆಗಂ" ಪ್ರಸಿದ್ಧನಾದವನು. (ಆದರೆ ಪಂಪನು ತನ್ನ ಪ್ರಪ್ರಪಿತಾಮಹನು ತನ್ನಧ್ವರಧೂಮದೆ ಕಱು ಮಾಡಿದಂ ನಿಜಯಶಮಂ ಎಂದು ಬಹು ಖಿನ್ನನಾಗಿ ನುಡಿದಿದ್ದಾನೆ). ಮಾಧವಸೋಮಯಾಜಿಯ ಮಗನೇ ಅಭಿಮಾನಚಂದ್ರ. ಇವನ ಮಗ ಕೊಮರಯ್ಯ. ಇವರೆಲ್ಲರೂ ವೈದಿಕಧರ್ಮದಲ್ಲಿ ನಿಷ್ಠೆಯಿಂದ ಬಂದವರು. ಆದರೆ ಕೊಮರಯ್ಯನ ಮಗನಾದ ಅಭಿರಾಮದೇವರಾಯನು ಅಂದರೆ ಪಂಪನ ತಂದೆಯು [ಜಿನವಲ್ಲಭನ ಗಂಗಾಧರಂ ಶಾಸನದಲ್ಲಿ ಪಂಪನ ತಂದೆಯ ಹೆಸರು ಭೀಮಪಯ್ಯ ಎಂದು ಉಕ್ತವಾಗಿದೆ—Journal of the Karnataka University· Humanities, 1966. VOL xi. P. 109] ಬ್ರಾಹ್ಮಣ್ಯವನ್ನು ತೊರೆದು, ಜೈನಮತಾವಲಂಬಿಯಾದನು. ಆ ಕಾಲದಲ್ಲಿ ಪಂಪಾಕ್ಷೇತ್ರವು ಪ್ರಸಿದ್ಧವಾದ ಪುಣ್ಯಕ್ಷೇತ್ರವೂ ಆಗಿದ್ದುದರಿಂದ (ಅಭಿರಾಮದೇವರಾಯನು ಜೈನಮತಾವಲಂಬಿಯಾದ ಹೊಸತರಲ್ಲಿ ತನ್ನವರ ಅವಹೇಳನಕ್ಕೆ ಗುರಿಯಾಗಿ ಕೆಲವು ಕಾಲ ಪಂಪಾಕ್ಷೇತ್ರದಲ್ಲಿ ಇದ್ದಿರಬಹುದು ಎನಿಸುತ್ತದೆ) ಆ ಕ್ಷೇತ್ರದ ಮೇಲಿನ ಭಕ್ತಿಯಿಂದ ಇಲ್ಲವೆ ವಿಶ್ವಾಸದಿಂದ ತನ್ನ ಮಗನಿಗೆ ಪಂಪನೆಂದು ಹೆಸರನ್ನಿಟ್ಟಿರಬೇಕು. ಪಂಪಾಕ್ಷೇತ್ರವು ಜೈನಕ್ಷೇತ್ರವೇ ಆಗಿರಬೇಕೆಂಬ ವೀರವ್ರತವು ಅವನಿಗೆ ಇಲ್ಲದಿರಬಹುದು. (ಪಂಪಾಕ್ಷೇತ್ರದಲ್ಲಿ ಜೈನಬಸದಿಗಳೂ ಇವೆ) ಈ ನಿಟ್ಟಿನಲ್ಲಿ ನೋಡಿದಾಗ ಈ ವಿಚಾರವು ಸಾಧುವೆನಿಸುತ್ತದೆ. ಬ್ರಾಹ್ಮಣ್ಯದ ಬಗೆಗೆ

ಬಹು ಜಿಗುಪ್ಸೆಯಿಂದ ನೊಂದು ನುಡಿದಿರುವ ಪಂಪನೂ ಅಂತಹವನಲ್ಲ. ಏಕೆಂದರೆ, ತನ್ನ ಆಶ್ರಯದಾತನಾದ ಅರಿಕೇಸರಿಯು ತನಗೆ ಉಂಬಳಿಯಾಗಿಕೊಟ್ಟ ಧರ್ಮಪುರವು ಜಿನದೇವಾಲಯಗಳಿಂದ ಕೂಡಿರಲಿಲ್ಲ. ಅದಕ್ಕೆ ಬದಲಾಗಿಋತ್ವಿಜರಿಂದ ಯಜ್ಞಗಳು ನಡೆಯುತ್ತಿದ್ದ, ಹೋಮಕಾರ್ಯಗಳು ದ್ವಿಜರಿಂದ ನಿರ್ವಹಿಸುತ್ತಿದ್ದ, ವೇದಘೋಷಗಳಿಂದ ಕೂಡಿದ್ದ ಅಗ್ರಹಾರವಾಗಿತ್ತು. ಇಂತಹ ಪುರವೊಂದನ್ನು ಪಂಪನು ಸ್ವೀಕರಿಸಿರುವುದು ಅವನ ಮನೋವೈಶಾಲ್ಯವನ್ನು ತಿಳಿಸುತ್ತದೆ. ಆದುದರಿಂದ 'ಪಂಪ'ವು ಕ್ಷೇತ್ರವಾಚಿಯಾದ ಪಂಪೆ (ಪಂಪಾಕ್ಷೇತ್ರ) ಎಂಬುದರಿಂದಲೇ ಬಂದಿರುವುದು ಸಂಭಾವ್ಯವೆನಿಸುತ್ತದೆ.

## ಆಧಾರ ಗ್ರಂಥಗಳು


1) ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠಃ.
—ಸಂಪಾದಕರು, ಡಾ. ಎ. ಎನ್. ನರಸಿಂಹಯ್ಯ 1952.

2) ಕನ್ನಡ ನಿಘಂಟು.
ಪ್ರಕಾಶಕರು, ಕನ್ನಡ ಸಾಹಿತ್ಯ ಪರಿಷತ್ತು–ಬೆಂಗಳೂರು.

3) ಹಳಗನ್ನಡ ನಿಘಂಟು.
—ಸಂಪಾದಕರು, ಎನ್. ಬಸವಾರಾಧ್ಯ. 1976.

4) ಶಬ್ದಮಣಿದರ್ಪಣಂ.
—ಸಂಪಾದಕರು, ಡಾ. ಎಲ್. ಬಸವರಾಜು

5) ಕರ್ನಾಟಕದ ಮಹಿಳೆಯರು. ಸಂಪುಟ–೧.
—ಸಂಪಾದಕರು, ಶ್ರೀಮತಿ ಚಿ. ನ. ಮಂಗಳ 1993.

6) ಮಹಾಕವಿ ಪಂಪ ಹಾಗೂ ಅವನ ಕೃತಿಗಳು. (ಆರು ಉಪನ್ಯಾಸಗಳು)
"ಪಂಪನ ಕಾಲ, ದೇಶ ಹಾಗು ವ್ಯಕ್ತಿತ್ವ"
— ಡಾ. ಬಿ. ಎಸ್. ಕುಲಕರ್ಣಿ.
ಪ್ರಕಾಶಕರು : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–1969.

7) ಮಾಣಿಕಸ್ವಾಮಿ ಚರಿತ್ರೆ.
ಸಂಪಾದಕರು : ಜಿ. ಜಿ, ಮಂಜುನಾಥನ್.
ಪ್ರಕಾಶಕರು–ಕನ್ನಡ ಅಧ್ಯಯನ ಸಂಸ್ಥೆ.
ಮೈಸೂರು ವಿಶ್ವವಿದ್ಯಾನಿಲಯ 1982.


—೦—

# ಪ್ರಭುದೇವರ ರಗಳೆ ಹಾಗೂ ವಚನಾಂಕಿತ

ಪ್ರೊ. ಸಿ. ಮಹಾದೇವಪ್ಪ

ಅಲ್ಲಮಪ್ರಭುವಿನ ಜೀವನವೃತ್ತಾಂತವನ್ನು ಕುರಿತ ಸಾಹಿತ್ಯಕೃತಿಗಳಲ್ಲಿ ಹಂಪೆಯ ಹರೀಶ್ವರವಿರಚಿತ 'ಪ್ರಭುದೇವರ ರಗಳೆ' ಕೇವಲ ಸಾಹಿತ್ಯ ಕೃತಿಮಾತ್ರವಾಗದೆ ಚಾರಿತ್ರಕ ಪ್ರಾಮುಖ್ಯವನ್ನು ಪಡೆದ ಐತಿಹಾಸಿಕ ದಾಖಲೆಯಾಗಿಯೂ ಇರುವುದೊಂದು ವಿಶೇಷ. ಬಸವಣ್ಣ, ಚನ್ನಬಸವಣ್ಣ, ಅಕ್ಕಮಹಾದೇವಿಯರೇ ಮೊದಲಾದ ಶಿವಶರಣ ಶರಣೆಯರು ಬಾಳಿಬೆಳಗಿದ ಆ ಹನ್ನೆರಡನೆಯ ಶತಮಾನ ಕನ್ನಡನಾಡಿನ ಇತಿಹಾಸದಲ್ಲಿ ಚಿರಸ್ಮರಣೀಯ ಯುಗ. ಅಂದಿನ ಐತಿಹಾಸಿಕ ಘಟನಾವಳಿಗಳು ಜನಮನದಿಂದ ಮಾಸಿಹೋಗದೆ ಇನ್ನೂ ಅವರ ನೆನಪಿನಲ್ಲಿ ಜೀವಂತಿಕೆಯಿಂದ ಇದ್ದ ಕಾಲದಲ್ಲಿ ಸಾಹಿತ್ಯರಂಗದಲ್ಲಿ ಮೆರೆದ ಕವಿ ಹರಿಹರದೇವ. ಆತನಿಂದ ಪ್ರಾಚೀನ ಕವಿಗಳ ಕಾವ್ಯಗಳಲ್ಲಿ ಅಲ್ಲಿಇಲ್ಲಿ ಕಾಣಿಸಿಕೊಳ್ಳುತ್ತಿದ್ದ 'ರಗಳೆ'ಯ ಛಂದಸ್ಸು ತನ್ನ ದಾಪುಗಾಲನ್ನು ಹಾಕುತ್ತ ನಲಿದು ನರ್ತಿಸುತ್ತ ಕಥನಕಾವ್ಯದ ನೀಳ್ಗತೆಯ ರಸೋಲ್ಲಾಸದ ಆವಿಷ್ಕಾರಕ್ಕೆ ನಾನಾಗತಿಯ ಚಾತುರ್ಯಮಯ ಜಾಣ್ಮೆಗೆ, ಅಸದೃಶವಾದ ನೂತನಕವಿತಾವಿಲಾಸಕ್ಕೆ ಮಧುರವೂ ಮಂಜುಳವೂ ಮಾರ್ಮಿಕವೂ ಆದ ಮಾಧ್ಯಮವಾಗತೊಡಗಿತು. ಆ ಘಟಾಛಂದಸ್ಸನ್ನು ಶಕ್ತಿಯುತವಾಗಿ ಬಳಸಿಕೊಂಡು ಪುರಾತನರ ಹಾಗೂ ಶಿವಶರಣ ಶರಣೆಯರ ಜೀವನಚಿತ್ರವನ್ನು ಜನಸಾಮಾನ್ಯರ ಮನಸವನ್ನು ಸೂರೆಗೊಳ್ಳುವಂತೆ ರಚಿಸಿ ಕೇವಲ ಪಂಡಿತರ, ರಾಜರ ಪಾಲಾಗಿದ್ದ ಕನ್ನಡವನ್ನು ಜನರ ಆತ್ಮೋನ್ನತಿಗಾಗಿ ಮೀಸಲಾಗುವಂತೆ ಮಾಡಿದ ಕೀರ್ತಿ ರಗಳೆಯ ಕವಿಯೆಂದೇ ಹೆಸರಾದ ಹರಿಹರನಿಗೆ ಸಲ್ಲತಕ್ಕದ್ದು. ಈ ಹೊಸಹಾದಿಯಲ್ಲಿ ಕನ್ನಡವನ್ನು ಕೈಹಿಡಿದು ನಡೆಸಿ ಭಕ್ತಿಯ ಹೊನಲನ್ನೇ ಸಾಹಿತ್ಯಸುಧೆಯೊಡನೆ ಹರಿಸಿ ಜನತೆಯನ್ನು ತಣಿಸಿದ ಕವಿ ಆತ. ಬಸವಾದಿ ಪ್ರಮಥರ ಚಾರಿತ್ರವನ್ನು ಸಾಹಿತ್ಯ – ಇತಿಹಾಸಗಳ ಸುಮಧುರ ಸಂಗಮವನ್ನಾಗಿ ಮಾಡಿ ಚಿತ್ರಿಸುವ ಮೂಲಕ ಕೇಳುಗರಲ್ಲಿ ಜೀವನೋತ್ಸಾಹವು ಚಿಲುಮೆಯ ಬುಗ್ಗೆಯಂತೆ ರಸೋಲ್ಲಾಸದಿಂದ ಉಕ್ಕಿಹರಿಯುವಂತಾಯಿತು.

ಶಿವಭಕ್ತರ ಚಾರಿತ್ರ್ಯಗಳನ್ನು ರಚಿಸಿ ಶರಣಜೀವನದ ಸತ್ಪಥವನ್ನು ಕಾಣಿಸಿ ಸನ್ಮಾರ್ಗದಲ್ಲಿ ನಡೆಯುವಂತೆ ಜನತೆಯನ್ನು ಒಲಿಸಿಕೊಂಡು ದೈವಭಕ್ತಿಯಿಂದ

ಬದುಕನ್ನು ಸಾರ್ಥಕಗೊಳಿಸಿಕೊಳ್ಳುವಂತೆ ದಾರಿತೋರಿದ ಕವಿ ಆತ. ಸಚ್ಚಾರಿತ್ರ್ಯವೇ ಜೀವನದ ಗುರಿಯಾಗಬೇಕೆಂಬ ಹಂಬಲವನ್ನು ಜನರಲ್ಲಿ ತನ್ನ ಕಾವ್ಯಗಳ ಮೂಲಕ ತುಂಬಿದವನು ಆತ. ಸತ್ಯದ ಹಾದಿಯನ್ನು ಬಿಡದೆ ನಡೆಯುವಂತೆ ಮಾಡುವ ಕಾವ್ಯವೇ ಕಲ್ಪಾಂತರಸ್ಥಾಯಿ, ವಿವೇಕೋನ್ನತಜನನಿಧಿ, ಸಂಸಾರವಿಶ್ರಾಮದೇಶವೆಂದು ಕರೆದು ಬಾಳಿಗೆ ನೆಮ್ಮದಿಯ ದಾರಿಯನ್ನು ಆತ ತೋರಿಸಿಕೊಟ್ಟನು.

ಆ ಹನ್ನೆರಡನೆಯ ಶತಮಾನದ ಆಧ್ಯಾತ್ಮಿಕ ಜನಜಾಗೃತಿಯು ವಚನಸಾಹಿತ್ಯ ಸಾಕಷ್ಟು ಪ್ರಭಾವವನ್ನು ಬೀರಿದ್ದುದರ ಫಲವಾಗಿ ಹರಿಹರನು ಸಾಹಿತ್ಯಕ್ಕೆ ದೇಶೀ ಯತೆಯ ರಸಲೇಪನವನ್ನು ಕೊಟ್ಟನು. ಜೀವನಮೌಲ್ಯವನ್ನು ಸತ್ಯಶರಣರ ಬಾಳಿ ನಲ್ಲಿ ಎತ್ತಿಹಿಡಿದು ಜನತೆಗೆ ಮಾರ್ಗದರ್ಶನ ನೀಡಿದನು. ಜನರಿಗಾಗಿ ಸಾಹಿತ್ಯ, ಭಕ್ತಿಯ ಬಾಳಿನ ಪರಮಾರ್ಥ ಸಾಧನವಾಗಿ ಸಾಹಿತ್ಯ, ಸತ್ಯಶೋಧನೆಗಾಗಿ ಸಾಹಿತ್ಯ ಎಂಬುದೇ ಧ್ಯೇಯವಾಯಿತು. ಈ ಹಿನ್ನೆಲೆಯಲ್ಲಿ ಕವಿ ಹರೀಶ್ವರನು ರಚಿಸಿರುವ 'ಪ್ರಭುದೇವರ ರಗಳೆ'ಯ ಸಕೃದ್ದರ್ಶನವನ್ನು ಮಾಡಿಕೊಂಡು ಅದರಲ್ಲಿ ಕಾಣಿಸಿರುವ ಅಲ್ಲಮನ ಚಾರಿತ್ರಿಕ (ಸ್ವಾರ್ಥೇಕಪ್ರತ್ಯಯ) ಘಟನಾವಳಿಯ ಐತಿಹಾಸಿಕತೆಹಾಗೂ ಅವನ ಅಂಕಿತದ ಹಿನ್ನೆಲೆಯನ್ನು ಕಂಡುಕೊಳ್ಳುವುದೇ ಈಲೇಖನದ ಉದ್ದೇಶ.

ಕೈಲಾಸದಲ್ಲಿ ಶಿವನ ಆಸ್ಥಾನ : ಒಡ್ಡೋಲಗದ ಒಂದೆಡೆಯಲ್ಲಿ ಪ್ರಮಥಗಣಂಗಳ ನಡುವೆ ನಿರ್ಮಾಯ: ಮತ್ತೊಂದೆಡೆ ಸುರಸತಿಯರ ಸಮೂಹ. ಶರಣನಿರ್ಮಾಯ ಹಾಗೂ ಸುರಸುಂದರಿಯೊಬ್ಬಳ ಪರಸ್ಪರನೋಟ, ದಯಾಪರ ಶಿವನ ಅನುಜ್ಞೆಯಂತೆ.

"ಭವನೊಲ್ದು ನೆಲಸಿರ್ದ ಸೆಜ್ಜೆ ತಾನೆಂದೆನಿಸಿ
ಬಳ್ಳಿಗಾವೆಯೆನಿಪ್ಪ ಪುರವರಂ"

ಅಲ್ಲಿ ನಾಗವಾಸಾಧಿಪತಿಯಪ್ಪ ನಾಯಕನ ಸತಿಯ ಗರ್ಭದೊಳುದಿಸಿ ಶಿಶು ವೆನಿಸಿ ಪುಟ್ಟಿದ ನಿರ್ಮಾಯ. ಲಿಂಗದಂಘ್ರಿಯೊಳೆ ನೋಟಂ ನಿಕ್ಕು ಕಣ್ದೆರೆದ ಅಭವರೂಪು.

"ಜಾತಕರ್ಮಂ ಮಾಡೆ ಶುಭಲಗ್ನವೆಂದೆನಲು
ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯಂ ತಂದು
ಹಿಗ್ಗುತ್ತಲಿಕ್ಕಿದಳು ಜನನಿ ನೇಹದಲಂದು."(ಮುದ್ರಿತ ಗ್ರಂಥದಿಂದ ಉದ್ಧೃತ)

'ಅಲ್ಲಯ್ಯ'ನೆಂದು ನಾಮಕರಣವಾಯಿತು. ತೊಟ್ಟಿಲಲ್ಲಿ, ತಾಯಂದಿರ ಕೈಗಳಲ್ಲಿ ಬೆಳೆಬೆಳೆದು ದಟ್ಟಡಿಯಿಡುತ್ತ ಹರಿದಾಡತೊಡಗಿದ ಬಾಲಕನು ಬೆಳೆಯುತ್ತ ಬಂದಂತೆ ಬೆಳೆದುದಾತನೊಡನೆ ಮೃದಂಗದ ಮಹಾವಿದ್ಯೆ. ಆ ವಿದ್ಯೆಯೊಡನೆ ಜವ್ವನವೂ ಬೆಳೆಯಿತು.

'ಹರೆಯದೊಳ್ಗಿರಿಜೇಶನಂ ಕೇಳಿಸಲ್ಕೆಂದು ಹರುಷದಿಂ ಗೊಗ್ಗೇಶ್ವರಾಲಯಕ್ಕೈತಂದು'
'ಅತಿರಸಾಮೃತಕಾಂತಿಯುತ ಸುಖಾಸ್ಪದಮೆಂಬ ನುತಗತಿ ನವೀನಗತಿ ರಸಗತಿಗಳಿಂ

ದೆಂಬ' ನಾನಾ ವರಸೆಗಳ 'ಸುಗತಿ ಸರ್ವಂಗೆ ಕರ್ಣಾಭರಣಮಾಗುತಿರೆ'

ಆ ಮುರಜದ ಮಧುರಗತಿಗೆ ಮಾರುಹೋಗಿ ನಂದಿ ಮಾಕಾಳರನ್ನೂ ಮರೆತಂತಹ ನಾಗಿ ಅಲ್ಲಮನ ವಾದನಕೌಶಲಕ್ಕೆ ಮೆಚ್ಚುತ್ತಿರುವ ಸಮಯ. ಆ ಪುರದ ಧನದತ್ತನಬಲೆಯ ಸುತೆಯಾಗಿ ಜನಿಸಿ,

'ರೂಪಿನೊಳು ರತಿಗೆ ಸರಸತಿಗುಪ್ಪರಂಗಟ್ಟ ವಸುಧೆಯೊಳು ಕಾಮಲತೆಯೆಂದೆಂಬ ನಾಮದಿಂ' ಬೆಳೆದು ಕುಸುಮಶರಪಂತೆ ನೆರೆದು ಮೆರೆದಳ್. ಭೂತೇಶವಂದನೆಗೆ ನೇಮಮಂ ಕೈಕೊಂಡು "ಮದನಶರವಿಕ್ಷು ಧನುವಿಂದೆ ಪೊರಮಡುವಂತೆ ಶಿವನ ಭವನಕ್ಕೆ ಪೊರಮಟ್ಟಳಾ ಕಾಮಲತೆ."

ಒಳಪೊಕ್ಕು ಶಿವಲಿಂಗಮಂ ದರುಶನಂ ಮಾಡಿ ಎಳಸಿ ಕೈಯ್ಯೆತ್ತಿ ಪೊಡಮಡುತಳ್ಕರಿಂ ನೋಡಿ ರಂಗಮಂಟಪದಲ್ಲಿ—

ಸವಿಗೊಡುವ ಸುಗತಿಗಳ ಸೊಬಗನೊಪ್ಪುತ್ತಲಿರೆ "ನಿಂದಂತೆ ನಿಂದಳಲ್ಲಮನ ನಿಲವಂ ಕಂಡು ಸಂದಳಾ ಪೊಸ ರೂಪು ರೇಖೆಗೆ ಮನಂಗೊಂಡು" "ಭೋಂಕನೆ ಕಂಡನಲ್ಲಮಂ' ಕಾಣುತ್ತೆ ಹರಹರಾ ಮರೆದನಾ ಸುಗತಿಯುಂ ಮುರಜಮಂ, ಹರಹರಾ ಮರೆದನಾ ಶಿವ ನುಮಂ ತನ್ನುಮಂ'' 'ಕಂಟಕಿತವಾದುವೆರಡುಂ ದೃಷ್ಟಿ' 'ಗಂಟಿಕ್ಕಿದುವು ನೋಟ ವೆಯ್ದೆ ಕಾಮಂ ಮೀರೆ ಇಕ್ಕಿದೆರಡುಂ ಕೈಗಳಿಕ್ಕಿದಂದದೊಳಿರಲು ಪಕ್ಕವಣಿಗರ ಮೇಲೆ ಜೋಲ್ದು ಮೂರ್ಛೆಗೆ ಸಲಲು' ಕಾಮಲತೆಯ ಸಖಿಯರ ನೆರವಿನಿಂದ ಆ ಇಬ್ಬರೂ ನಾಗವಾಸಾಧಿಪತಿಯ ಅರಮನೆಯನ್ನು ಸೇರಿ, "ತಡವು ತವಕದೊಳದ್ದ ನವನವ ಪ್ರೇಮಿಗಳು ಪಲವು ಸಂವತ್ಸರಂ ನಿಮಿಷಮಾಗುತ್ತಮಿರೆ'' ತೊಲಗದಲುಗದೆ ಇರ್ದು "ಕಂತುಹರನಿತ್ತಾಜ್ಞೆ ಹತ್ತಿರಕೆ ಬಂದಿರ್ದು ಕಾಮಲತೆಯಂ ಬಂದು ಹತ್ತಿತ್ತು ಮಹಜ್ವರಂ". "ದೇವಲೋಕಕ್ಕೆ ನಡೆದಳ್ಕಾಮಲತೆಯುಂದು".
"ಸಂದ ನೇಹದ ಸದ್ಗುಣಂಗಳಂ ನೆನೆವುತುಂ ಕಾಮಲತೆ ತನ್ನ ಮನಮಂ ಸುತ್ತಲಲ್ಲಮಂ ಕಾಮಲತೆ ಹಾ ಕಾಮಲತೆ ಎನುತಲಲ್ಲಮಂ ಮರುಗಿ ಮನವೆತ್ತಿಕ್ಕಿದಂತಾಗೆ ಪರಿತಂದು ಪುರದ ಹೊರಗಣ ಕಣಿಗಿಲೆಯ ತೋಂಟಕೆಯ್ತಂದು ಕುಳ್ಳಿರ್ದು ಚಿಂತೆಯೊಳ ಗಾಳುತುಂ ಮುಳುಗುತುಂ

ತಳ್ಳಂಕದಿಂದೆ ನೆಲನಂ ನೋಡಿ ಸುಯ್ಯುತುಂ ತಲೆವಾಗಿ ಕಣ್ಣೀರ್ಗರೆಯೆ ಚಿಂತಿಸುತಂದು ನೆಲನಂ ಬರೆಯೆ ಬರೆದ ಹಜ್ಜೆಯೊಳಗಂತೊಂದು" ನಸುವೆಳಗು ತೋರುತುಂ ಹರಹರ 'ಶಿವಜ್ಞಾನದಂಕುರಂ ತೋರ್ಪಂತೆ' 'ಹೊನ್ನಕಳಶಂದೋರಲತಿ ಕೌತುಕಂಬಟ್ಟು,' ಅಗೆದು ಅಗೆಯಲಾರದೆ ಬಿಟ್ಟು ರಾಜರಲ್ಲಿಗೆ ಬಂದು ನಡೆದುದನು ತಿಳಿಸಲ್ಕೆ ಪಟ್ಟದಾನೆ ಯನೇರಿ ಬರಲು ಆ ಕಳಶವಿರ್ದಾ ಸೀಮೆ ಸಮೀಪಿಸುತ್ತಿದ್ದಂತೆ ಆನೆ ಮುಂದಡಿಯಿಡದೆ ನಿಂದುದನು ಕಂಡು ರಾಜನು

ಆನೆಯಿಂದಿಳಿದು ಅಲ್ಲಮನೊಡನೆ ನಡೆತಂದನು. ರಾಜಾಜ್ಞೆಯಂತೆ ಕೋಟೆಗುದ್ದಲಿ ಗಳು ಅಗೆಯತೊಡಗಿದಾಗ ಹೊನ್ನ ಕಳಶದ ಕೆಳಗೆ ಕಂಡುಬಂದದ್ದು ''ಸೂತ್ರಿಕ ಸಿಂಹ ಮಂಟಪದ ವಲಯ". ಅದರ ಬದಿಯಲ್ಲೇ ''ವೃಷಭಾಂಕಿತ ಶಿವಾಲಯ" '' ಕದವಂ

ತೆರೆದೊಳಪೊಕ್ಕು ನೋಡಲಾರ್ಪವರುಂಟೆ?" ಎಂದು ರಾಜನು ಕೇಳಲ್ "ಬರ್ಪರುಂ ನುಡಿಯೆಂದುಸಿರದಿರ್ದುದಂ ಕಂಡು, ಮನದೊಳಲ್ಲಮನತಿ ವಿರಕ್ತಿಯಂ ಕೈಕೊಂಡು" "ಸತಿ ಕಾಮಲತೆಯಿಲ್ಲ ಇನ್ನೇಕೆ ದೇಹದ ದುರಾಸೆ, ಇದ ಸುಡುಯೆಂದು ತನ್ನ ಮನದೊಳಗೆ ನಿಶ್ಚೈಸಿ" "ಶಶಿಧರನೆ ಶರಣೆನುತೆ ಕಡುನಿಷ್ಠೆ ಕೈಕೊಂಡು, ನೂಂಕಿ ನಿವಿದೊರ್ತ್ತುತ್ತೆ ಒಂದು ಕದಹಂ ತಗೆದು ಭೋಕಂನೊಳಪೊಕ್ಕು" ನಡೆಯುತ್ತ ಮುಂದೆ ಕಂಡು ಬಂದ ಮಹಾಲಿಂಗದಂಘ್ರಿಗೆರಗಿ ಕೆಲನನೀಕ್ಷಿಸಲು

"ಕೀಲಿಸಿದ ಪದ್ಮಾಸನಂ, ಪುಲಿದೊವಲ್, ತನುವನಾಲಿಂಗಿಸಿದ ಭಸಿತವಮಳ ಸೂತ್ರಂ ನೆರೆವ ಬೆಳಪಕಣ್ ಸುಲಿಪಲ್ಲು ಹೊಳೆವ ಮುಖಮಂಡಲಂ ಇಳಿದ ಜಡೆ ರುದ್ರಾಕ್ಷಿಮಾಲೆ ಮಣಿಕುಂಡಲಂ ಕೈಯ ಶಿವಲಿಂಗದೊಳ್ನಟ್ಟ ನೋಟಂ ಮೆರೆಯೆ ಮೆಯ್ಯ ಕೋಮಲತೆ ನೆಳನಳಿಸಿ ನಯಮಂ ಕರೆಯೆ, ಮಿಗೆ ಬಳ್ಳಿವರಿದ ಕರ-ಪದನಖಂ ಲತೆಯಾಗೆ ಸೊಗಯಿಸುವ ಹಸ್ತರಾಗಂ ಸುಪಲ್ಲವಮಾಗೆ ಅರಲ್ದ ನಯನದ್ವಯಂ ವಿಕಸಿತ ಕುಸುಮಮಾಗೆ ಕರತಳದ ಶಿವಲಿಂಗವಮೃತರಸಫಲವಾಗೆ ಕಲ್ಪತರುವಿನ ತೆರದೊಳಿರ್ದನನುಪಮ ಯೋಗಿ ಕಲ್ಪನೆಯ ವಶವಲ್ಲದಪ್ರತಿಮ ಶಿವಯೋಗಿ ಕಣ್ಣಲ್ಲಿ ಜೀವಮಂ ಪಿಡಿದಿರ್ದ ಮಾಳ್ಕೆಯಿಂ ತಿಣ್ಣವೆನೆ ಲಿಂಗಮಂ ಪಿಡಿದಿರ್ದನೊಲ್ಮೆಯಿಂ

ಇರೆ ಮಹಾಗುರುವನಲ್ಲಮದೇವನೀಕ್ಷಿಸುತೆ ಹರುಷದಿಂ ಸಾತ್ವಿಕರಸಂ ಪುಟ್ಟೆ ಕಂಪಿಸುತೆ ಸನ್ನಿಧಿಯ ಗುಣಂ ಶಿವಜ್ಞಾನಮಂ ಪುಟ್ಟಿಸಲು ತನ್ನೊಳಗೆ ಶಿವಸ ತತ್ತ್ವದ ಘನಂ ಪುಟ್ಟಿರಲು ಪೊಗಳಲ್ಕೆತೊಡಗಿದಂ ಸಿದ್ಧಶಿವಯೋಗಿಯಂ ಮಿಗೆ ಮೋಕ್ಷಲಕ್ಷ್ಮಿಯೊಡಗೂಡಿರ್ದ ಭೋಗಿಯಂ ದೇವ ನಿರ್ಮಳ ನಿತ್ಯನಿರುಪಮ ಮಹಾಯೋಗಿ ದೇವ ನಿರ್ಮಳ ನಿಜಾನಂದಕರ ಶಿವಯೋಗಿ ಶಿವನನೊಚ್ಚತವಾಗಿ ಕೈಕೊಂಡ ಶಿವಯೋಗಿ ಭವನ ಮೂರ್ತಿಗೆ ಸೋಲ್ತು ಕಣ್ಣಿಟ್ಟಚಲಯೋಗಿ ನೋಟದೊಳು ಲಿಂಗಮಂಸೆರೆಗೆಯ್ದ ಶಿವಯೋಗಿ ಕೂಟದೊಳು ಕಣ್ಣೆ ತನುವಾದ ಬೆಡಗಿನ ಯೋಗಿ ಮದನನಂ ಮರ್ದಿಸಿಯೆ ಸಂದಿರ್ದ ಭವಯೋಗಿ ಹೃದಯದೊಳು ಭಕ್ತಿಯಂ ತಳೆದಿರ್ದ ಸ್ಥಿರಯೋಗಿ ಎಂದು ಪೊಗಳುತ್ತೆ ಕೈಯೆತ್ತಿ ನಿಲಲಲ್ಲಮಂ ಸಂದ ಶಿವಯೋಗಿ ಹಿ[ಲ]ಗ್ಗುತ್ತ ಮರೆದೆಲ್ಲಮಂ" ಮನದೊಳಗಿವಂ ಕಾರಣಿಕನೆಂದು ನಿಶ್ಚೈಸಿ" ಘಳಿಲನಲ್ಲಮಂ ಕೈಯೊಡ್ಡಲಾಕ್ಷಣಮೆ "ನೋಟದಿಂದಂಗಯ್ಯಲಿಕ್ಕಿದಂ ಲಿಂಗಮಂ ಕೂಟದಚ್ಚಳಿಯದಸುವರೆಸಿ ಶಿವಲಿಂಗಮಂ ಲಿಂಗದೊಡನೇ ಕೂಡಿ ಹೋದುದಾತನ ಜೀವ" "ಅಗಳಲ್ಲಮನವಯವಂ ಲಿಂಗ ಸೋಂಕಿಂದೆ ರಾಗದಿಂದಂಕುರಿಸಿ ನಳನಳಿಸಿ ಚೆಲ್ವಿಂದೆ ಪೊರಮಟ್ಟನಲ್ಲಮಂ ಗೊಗ್ಗೇಶ್ವರ ಮೆಚ್ಚೆ. ಪೋಗುತಿರ್ದಂ ಲಿಂಗವೆತ್ತತ್ತಲೊಯ್ದತ್ತ" "ಕರತಳಾಮಳಕವಾದುದು ತತ್ವವೀತಂಗೆ ಪರಮಶಿವಯೋಗ ನಿಜವಾದುದೀತಂಗೆ ಸಸಿ ರವಿಗಳಂತೆ ಬೆಳಬೆಳಗುತಿರ್ದಂ ನೋಡೆ ಉಸಿರಲಿಲ್ಲದ ಪರಮಬ್ರಹ್ಮವಾದಂ ಕೂಡೆ"—

ಹೀಗೆ ಕರಸ್ಥಲದ ಅನುಮಿಷದಿಂ ಹರನ ಅವತಾರವೇ ಆದಂತೆ ನಡೆತರುತ ತರುಗಿರಿ ವನ ನದಿಗಳ ಬಳಿ ದಿನ ಮಾಸ ಸಂವತ್ಸರಗಳೆನ್ನದೆ ಶಿವಲಿಂಗಪೂಜಾನಿರತನಾಗಿದ್ದು ಸಂಚಾರಮಾಡುತ್ತ ಬರುತೆ

"ಬಸವಣ್ಣನಂ ಕಂಡು ಮಾತಾಡುತುಂ ಹರನ ನಿಲವಿನ ಪರಿಯನೊಲ್ಮೆಯಿಂ ತೋರುತುಂ ನಡೆತಂದು ಚೆನ್ನ ಸೊನ್ನಲಿಗೆ ಪುರಕೈತಂದು ವೃಷಮೂರ್ತಿ ಸಿದ್ಧರಾಮ

ನನರಿಸು ಕಲಿಯುಗಂ ಪೊಲ್ಲೆಂದು ಬುದ್ಧಿಯಂ ಪೇಳುತಂ ಸಲೆ ಸಮಾಧಿಗೆ ಪೋಗೆನು ಕಿಚ್ಚೆದೋರುತುಂ ಶ್ರೀಪರ್ವತಾಭಿಮುಖನಾದನಲ್ಲಮದೇವ." ಆ ಪರ್ವತಂ ಮುಟ್ಟಿ ಬಂದ ಅಲ್ಲಮಂ ಕಂಡ ಅದ್ಭುತಗಳ್ ಪಲವು :

ಕೈಕಾಲ್ಗಳುಳ್ಳ ಸರ್ಪಂಗಳು ; ಮಾತಾಡುವ ವೃಕ್ಷಂಗಳು ; ನಡೆವ ಗಿಡುಗಳು ; ಅಷ್ಟವದನದ ಮೃಗಗಳು, ಉರಿವ ಔಷಧಂಗಳು ; ಹಾಡುವ ಲತಾವಳಿಗಳು ; ಸುಳಿವ ಕಲ್ಗಳು, ನೋಡುವ ಗಿರಿಗಳು ; ರೆಕ್ಕೆಯ ಆನೆಗಳು ; ದನಿಗೈವ ಹಲಬಗೆಯ ಗುಹೆಗಳು. ಮುಂದೆ ಕದಳೀವನ. ಅಲ್ಲಿ ಭೀಕರ ದೃಶ್ಯಗಳನ್ನು ಎದುರಿಸಿ ದಾಟಿ, ಭೈರವನಿಂದ ಶಿವನಲ್ಲಿಗೊಯ್ದು ದಾರಿಗಂಡು ಮಾರ್ಗದಲ್ಲಿ ಪವಣಿಲ್ಲದದ್ಭುತವೆನುತ್ತ, ಅಸಮಾಕ್ಷನವತಾರವಾಗಿ ನಡೆತರುತ್ತ ಕೈಲಾಸವನ್ನು ಕಂಡು ಶಿವನಿಂದ ಮುನ್ನಿನಂತೆ ನಿರ್ಮಾಯ ಪೆಸರಿಂದ ಗಣಪದವಿಯನ್ನು ಹೊಂದಿ "ಭವನ ಸುಪ್ರಭೆಯೊಳಗೆ ಸಂದಿರ್ದನಲ್ಲಮಂ ನಿರುಪಾಧಿಕಜ್ಯೋತಿಯಾಗಿರ್ದನಲ್ಲಮಂ" ಎಂದು ಬಗೆಬಗೆಯಾಗಿ ಸ್ತುತ್ಯನಾದ ಅಲ್ಲಮನ ಕಥೆ ಮುಗಿಯುತ್ತದೆ. ಇದು ಕಥೆಯ ತಡಿಕೆ ಮಾತ್ರ.

ಪ್ರಭುದೇವರ ರಗಳೆಯ ಈ ಸ್ಥೂಲರೇಖೆ ಕವಿಯ ರಸಮಯ ವರ್ಣನೆಗೆ ಅಪವಾದವಾಗಿ ತೋರಿದರೂ ಅಲ್ಲಮನ ಜೀವನವೃತ್ತಾಂತದ ಪ್ರಮುಖ ಘಟನೆಗಳನ್ನು ಕಿಂಚಿತ್ತಾದರೂ ಕವಿಯ ಮಾತಿನಲ್ಲಿ ಅಡಕಗೊಳಿಸಿದೆ.

'ಗೊಗ್ಗೇಶ್ವರ ಪ್ರಸಾದದ ಬೆಣ್ಣೆ' 'ಗೊಗ್ಗೇಶ್ವರಾಲಯ' 'ಗೊಗ್ಗೇಶ್ವರಂ ಮೆಚ್ಚಿ' ಎಂಬ ಈ ಮೂರು ಪದಪ್ರಯೋಗಗಳು ಮೇಲಣ ಕಥಾವೃತ್ತಾಂತದ ಮೂರು ಘಟ್ಟಗಳಲ್ಲಿ ಎಂದರೆ ಅಲ್ಲಮನ ಜೀವಿತದ ಮೂರು ಪ್ರಮುಖ ಸಂದರ್ಭಗಳಲ್ಲಿ ಕಾಣಿಸಿಕೊಂಡಿವೆ. ಜನನಕಾಲದ 'ಗೊಗ್ಗೇಶ್ವರ ಪ್ರಸಾದದ ಬೆಣ್ಣೆ'ಗೂ, ಹರೆಯದಲ್ಲಿ ಅಲ್ಲಮನು ಗಿರಿಜೇಶನನ್ನು ತನ್ನ ಮುರಜಗತಿಯಿಂದ ಕರ್ಣಾನಂದಗೊಳಿಸಲು ಹೋದ 'ಗೊಗ್ಗೇಶ್ವರಾಲಯ'ಕ್ಕೂ ಸಹಜಸಂಬಂಧವಿದೆಯೆನ್ನಲು ಅಡ್ಡಿತೋರದು. ಗೊಗ್ಗೇಶ್ವರಾಲಯದ ಗಿರಿಜೇಶನನ್ನು ಶರ್ವ, ಶಂಕರ, ಶಿವಲಿಂಗವೆಂದು ಕರೆದಿದೆ. ಈ ಗೊಗ್ಗೇಶ್ವರಾಲಯ ಬಹುಶಃ ಊರ ಒಳಗಿನದು. ಆ ದೇವಾಲಯದಲ್ಲಿಯೇ ಆತ ಕಾಮಲತೆಯನ್ನು ಕಂಡು ವ್ಯಾಮೋಹಿತನಾದುದು. ಆಕೆಯೊಡಗೂಡಿ ಕಳೆದ ಪ್ರೇಮದ ದಿನಗಳು ಕೊನೆಗೊಂಡು ಬಾಳು ಬರಿದೆನಿಸಿದ ಸಂದರ್ಭದಲ್ಲಿ ಊರಹೊರಗೆ ತೋಟದಲಿ ಮಣ್ಣುಮುಚ್ಚಿ ಯೊಳಗಿದ್ದ ದೇಗುಲದೊಳಗೆ ಅನಿಮಿಷಶಿವಯೋಗಿಯಿಂದ ಲಿಂಗವನ್ನು ಪಡೆದು ಅಲ್ಲಿಂದ ಹೊರಹೊರಟಾಗ ಪ್ರಯುಕ್ತವಾದ 'ಗೊಗ್ಗೇಶ್ವರಂ ಮೆಚ್ಚಿ' ಎಂಬ ಉದ್ಗಾರ ಆ ಯಾವ ಒಂದು ದೇವಾಲಯಕ್ಕೇ ಸೇರಿದ ದೇವರ ಹೆಸರಲ್ಲವೆಂಬುದನ್ನು ಪ್ರಕಟಿಸುತ್ತದೆ. ಅಲ್ಲಮನ ಅಂಗೈಗೆ ಅನಿಮಿಷನಿಂದ ಬಂದ ಲಿಂಗ 'ವೃಷಭನಾಮ ಶಿವಲಿಂಗ'ವೆಂಬುದನ್ನು ಕವಿಯೇ ಸಾರಿದ್ದಾನೆ. ಇದನ್ನು ಮರೆಯಬಾರದು.

ರಗಳೆಯಲ್ಲಿ ನಿರೂಪಿತ ವಸ್ತುಸ್ಥಿತಿ ಹೀಗಿರುವಾಗ, "ಬಳ್ಳಿಗಾವೆಯ 'ಗೊಗ್ಗೇಶ್ವರ' ನೆಂಬ ದೇವರು ಅಲ್ಲಮನ ಆರಾಧ್ಯದೈವವೆಂದು ನಮಗೆ ಹರಿಹರನ ರಗಳೆಯಿಂದ ತಿಳಿದು ಬರುವುದು" "ಅಲ್ಲಮನ ವಚನಗಳಲ್ಲಿ ಈ 'ಗೊಗ್ಗೇಶ್ವರ' ಎಂಬ ಅಂಕಿತವು ಬೇರೆಬೇರೆ ಓಲೆಗಳಲ್ಲಿ ಬೇರೆಬೇರೆ ರೂಪಗಳಲ್ಲಿ ಕಂಡುಬರುವುದು. ಆದರೆ ಅವೆಲ್ಲ "ಗುಹೇಶ್ವರ"--ಎಂಬ ಪದದ ರೂಪಾಂತರಗಳೇ ಹೊರತು ಬೇರೆಯೇನೂ ಅಲ್ಲ. ಹೀಗೆ "ಗುಹೇಶ್ವರ, ಗೊಗೇಶ್ವರ (ಗೋಗೇಶ್ವರ ಆದುದರಿಂದ ಗೊಗ್ಗೇಶ್ವರ)"–ಅಲ್ಲಮನ ವಚನ ಚಂದ್ರಿಕೆ—1960 (ಪೀಠಿಕೆ, ಪುಟ ೧ಲ)ಯ ಈ ಹೇಳಿಕೆಯಲ್ಲಿ ಯಾವುದು ಎಷ್ಟು ಸಮಂಜಸ ? ಎಂಬುದೆ ಪ್ರಶ್ನೆ. ಇದರ ವಿಮರ್ಶೆ ಅನಿವಾರ್ಯ.

ಮತ್ತೆ "ಈ ಎಲ್ಲ ಅಂಕಿತಗಳ ಮೂಲರೂಪ "ಗುಹೇಶ್ವರ" ಎಂಬುದೇ. ಇದಕ್ಕೆ ವಚನಕಾರರ ಮತ್ತು ವ್ಯಾಖ್ಯಾನಕಾರರ ಸಮ್ಮತಿಯೂ ಇದೆ". ಎಂದು ತಿಳಿಸಿ ಅದರ ಅರ್ಥ : ದೇಹಕ್ಕೆ ಒಡೆಯ, ಗೂಢ, ನಿರಾಕಾರ, ಅತೀತ, ಇತ್ಯಾದಿಗಳಿವೆ ಎಂದು ಹೇಳಿ ಮನುಮುನಿಗುಮ್ಮಟಯ್ಯಗಳ ವಚನಭಾಗ "ಐದರ ಗುಹೆಯೊಳಗೆ ಗುಹೇಶ್ವರ ನಾದೆ" ಎಂಬುದನ್ನು ತಮ್ಮ ಹೇಳಿಕೆಗೆ ಆಧಾರವಾಗಿ ಆ ಗ್ರಂಥಸಂಪಾದಕರು ಸೂಚಿಸಿ ದ್ದಾರೆ.

ಆ ವಚನದ ಸಮಗ್ರಸಾರವನ್ನಿಲ್ಲಿ ನೋಡಬಹುದು.

"ಕಾಲೆರಡಱಲ್ಲಿ ನಿನ್ನಾಟವೇ : ಕೈಯರಡಱಲ್ಲಿ ನಿನ್ನ ಬಂಧವೆ :
ಮೈಯೊಂದಱಲ್ಲಿ ನಿನ್ನ ಭೋಗವೆ ; ಬಾಯೊಂದಱಲ್ಲಿ ನಿನ್ನ ತೃಪ್ತಿಯೇ ?
ಐದಱ *ಗುಹೆಯೊಳಗೆ ಗುಹೇಶ್ವರ* ನಾದೆ ;
ಮೂಱಱ ಗೂಡಿನೊಳಗೆ ಗುಮ್ಮಟನಾದೆ ;
ಆಱಱ ಅಂಗವ ಹಱಿದು ಅಗಮ್ಯೇಶ್ವರಲಿಂಗವಾದೆ,
ಮೀಱಿ ಕಾಬುದೇನು ಹೇಳಿರಣ್ಣಾ ! (ಸ್ವಂತ ಓಲೆ : ಚಿಂ.ಸಂ.ವ.1)

*ಇದೇ ಓಲೆಪ್ರತಿಯ ಲಿಪಿಕಾರನ ಮುಂದಿನ 'ಬಸವೇಶ್ವರಸ್ತೋತ್ರ' ಗ್ರಂಥದಲ್ಲಿ *"ಗೊಹೆಯೊಳಗೆ ಗೊ ಹೆ ಶ್ವರ"*—ಎಂಬುದು ಓಲೆಯಲ್ಲಿನ ಶಬ್ದಗಳ ಲಿಖಿತರೂಪ. ಗುಮ್ಮಟಾರ್ಯನ ಈ ವಚನದ ಈ ಉಲ್ಲೇಖಕ್ಕೂ ಅಲ್ಲಮನ ವಚನಾಂಕಿತಕ್ಕೂ ಯಾವ ಸಂಬಂಧವೂ ಇಲ್ಲವೆಂಬುದು ಮೇಲುನೋಟಕ್ಕೇ ಕಂಡುಬರುವ ಅಂಶ. 'ಗುಹೆ'ಯ ಆದ್ಯಕ್ಷರದ ಉಕಾರ ಒಕಾರವಾಗಿ 'ಗೊಹೆ' ಆಗುವುದು ಆಡುಮಾತಿನಲ್ಲಿ ಸಹಜವಾಗಿ ಆಗುವ ಸ್ವರವ್ಯತ್ಯಯದ(Mutation of vowels) ನಿಯಮ. ಆದರೆ 'ಗವಿ' ಇಲ್ಲವೆ ಗುಹೆ ಗಿರಿಗಳೊಳಗಣ ನಿವಾಸವಾಗಿರುವುದೇ ಹೊರತು ಅದು ಮಣ್ಣು ಮರೆಯ ದೇಗುಲಕ್ಕೆ ಅನ್ವಯಿಸುವ ಶಬ್ದವಲ್ಲ. ಪಂಚಭೂತಾತ್ಮಕ ದೇಹವನ್ನು 'ಗುಹೆ'ಗೆ ಹೋಲಿಸುವುದಕ್ಕೂ ಅಲ್ಲಮನ ಅಂಕಿತಕ್ಕೂ ಯಾವ ಸಂಬಂಧವೂ ಇಲ್ಲವೆಂಬುದು

ಖಚಿತ. (ನೋ: ಸಂಶೋಧನ ತರಂಗ ಸಂ.2 ಪುಟ 156 ಶ್ರೀ ಎಂ. ಚಿದಾನಂದ ಮೂರ್ತಿ).

ಪ್ರಭುದೇವರ ವಚನದ ಅಂಕಿತದ ಮೂಲಶಬ್ದ ಹಾಗೂ ಅದರ ರೂಪವೇನೆಂಬುದರ ವಿಮರ್ಶೆಯನ್ನು ಮುಂದೆ ಮಾಡಲಾಗಿದೆ. ಇನ್ನಿತರ ಮುದ್ರಿತ ಗ್ರಂಥಗಳಲ್ಲಿ ಅಲ್ಲಮನ ವಚನಗಳ ಅಂಕಿತವು ಅಚ್ಚುಗೊಂಡು ಹೇಗೆ ಪ್ರಚಾರವಾಗಿದೆ ಎಂಬುದನ್ನು ಗಮನಿಸುವ ಮುನ್ನ ಇತರ ಪ್ರಾಚೀನ ಓಲೆಗಳಲ್ಲಿ ವಾಸ್ತವವಾಗಿ ಹೇಗೆ ಲಿಖಿತಗೊಂಡಿದೆ ಎಂಬುದನ್ನು ಪರಿಶೀಲಿಸಬಹುದಾಗಿದೆ.

ಹನ್ನೆರಡನೆಯ ಶತಮಾನದ ಶಿವಶರಣರ ವಚನಗಳು ವಚನಭಂಢಾರಿ ಶಾಂತರಸರೇ ಮೊದಲಾದವರಿಂದ ಕಲ್ಯಾಣಪಟ್ಟಣದಲ್ಲಿ ಶೇಖರಿಸಿದ್ದದ್ದು ಅಲ್ಲಿ ಆಗಿಹೋದ ಧಾರ್ಮಿಕ ಕ್ರಾಂತಿಯ ಬಳಿಕ ಬಹುಮಟ್ಟಿಗೆ ನಷ್ಟವಾಗಿಹೋಗಿದೆ. ಅಲ್ಲಮಪ್ರಭು ತಮ್ಮ ಒಂದು ವಚನದಲ್ಲಿ ಒಂದೆಡೆ ಹೇಳಿಕೊಂಡಿರುವಂತೆ ಅವರಿಂದಲೇ ಹಾಡಲ್ಪಟ್ಟ ಅವರ ಗೀತೆಗಳ ಸಂಖ್ಯೆ ಎರಡೆಂಬತ್ತು ಕೋಟಿ. ಮತ್ತೊಂದು ವಚನದ ಪ್ರಕಾರ ಎಂಬತ್ತು ಕೋಟಿ. ಆದರೆ ಈಗ ಕೈಗೆ ದೊರಕಿರುವ ವಚನಗಳ ಸಂಖ್ಯೆ ಕೇವಲ ಮೂರು ಸಾವಿರವನ್ನೂ ಮುಟ್ಟಿಲ್ಲ. ಇನ್ನುಳಿದವರ ವಚನಗಳು ಎಷ್ಟಿದ್ದವು ಎಂಬುದು ಖಚಿತಗೊಂಡಿಲ್ಲ. ಕಲ್ಯಾಣದ ಕ್ರಾಂತಿಯ ಬಳಿಕ ವಚನಭಂಡಾರವು ಶರಣರೊಡನೆ ದೇಶದ ನಾನಾ ಕಡೆಗೆ ಚೆದರಿ ಹೋಗಿ ಮೂಲೆಗುಂಪಾಗಿ ಹೋದವು.

ಅವುಗಳಲ್ಲಿ ನಷ್ಟವಾಗದೆ ಉಳಿದವುಗಳನ್ನು ಸಂಗ್ರಹಿಸುವ ಕಾರ್ಯ ಹದಿನೈದನೆಯ ಶತಮಾನದ ಪೂರ್ವಾರ್ಧದ ವಿಜಯನಗರ ಸಾಮ್ರಾಜ್ಯದಲ್ಲಿ ಬಿರುಸಿನಿಂದ ಆರಂಭವಾಯಿತು. ಆ ವಿದ್ಯಾನಗರದ ಕಲ್ಲಮಠದ ಪ್ರಭುದೇವ, ಮಗ್ಗೆಯ ಮಾಯಿದೇವ ಹಾಗೂ ಹುಲಿಗೆರೆಯ ಮಹಾಲಿಂಗದೇವರೇ ಬಹು ಪ್ರಮುಖರಾದವರು, ಅಲ್ಲದೆ ಮೊದಲಿಗರು. ಭಕ್ತಿಭಂಡಾರಿ ಜಕ್ಕಣಾರ್ಯ, ಗುಬ್ಬಿಯ ಮಲ್ಲಣ್ಣ, ಚಾಮರಸ ಹಾಗೂ ಸಿಂಗಿರಾಜರ ಕೃತಿಗಳು 12ನೆಯ ಶತಮಾನದ ವಚನಸಾಹಿತ್ಯದ ಮಹಿಮಾನ್ವಿತ ಪ್ರಭಾವದಿಂದ ಮೂಡಿದ ವೈಚಾರಿಕ ಹಾಗೂ ಅನುಭಾವಿಕ ಸಾಹಿತ್ಯ ಸಂಪತ್ತಿನ ಭಂಡಾರಗಳು. ಷಟ್ಸ್ಥಲ ಹಾಗೂ ಅದರ ನೂರೊಂದರ ಸ್ಥಲವಿವೇಚನೆಯನ್ನು ಮೊತ್ತಮೊದಲಿಗೆ ವಚನಸಂಗ್ರಹ ಹಾಗೂ ಸಂಕಲನಗಳ ಮೂಲಕ ಮಾಡಿ ವಚನಗಳ ವ್ಯಾಖ್ಯಾನವನ್ನು ಕೃತಿರೂಪದಲ್ಲಿ ಮುಂದಿನ ಈ ತಲೆಮಾರಿಗೆ ಉಳಿಸಿಕೊಟ್ಟ ಕೀರ್ತಿ 15ನೆಯ ಶತಮಾನದ ವಿದ್ಯಾನಗರಕ್ಕೂ ಹುಲಿಗೆರೆಗೂ ಸಲ್ಲಬೇಕಾಗುತ್ತದೆ.

ಮಹಾಲಿಂಗದೇವರು, ಅವರ ಕೃತಿಗಳ ಬಗೆಗೆ ಬರೆಯುತ್ತ ಕವಿಚರಿತೆಕಾರರು 'ಇವನಿಗೆ ವಾರಣಾಸೀಶನೆಂದೂ ಹೆಸರು ಇದ್ದಂತೆ ತೋರುತ್ತದೆ' ಎಂದಿದ್ದಾರೆ. ಈ ವಾರಣಾಸಿಯ ಗುರುವನ್ನು ಕುರಿತ ಒಂಪು ವೃತ್ತ ಮಗ್ಗೆಯ ಮಾಯಿದೇವರ ಅನುಭವ

ಸೂತ್ರದ ಓಲೆಯ ಪ್ರತಿಯೊಂದರ ಆದಿಯಲ್ಲಿ ಹೀಗಿದೆ.

ಶ್ರೀಗುರುವಾರಣಾಸಿಯೊಡೆಯೆಂಗೆ ಭವಂಗೆ ಶಿವಂಗೆ ಚಾರುಶೈ
ವಾಗಮವಾರಿರಾಶಿ ಪರಿಪೂರ್ಣಸುಧಾಕಿರಣಂಗೆ ಷಟ್‌ಸ್ಥಲೀ
ಯೋಗವಿಶುದ್ಧಬುದ್ಧ ಚರಿತಾರ್ಥಿತ ಭಕ್ತಿಲೀನಂಗೆ ಸಂಸೃತಿ
ತ್ಯಾಗಪರಿಸ್ಕೃತಂಗೆ ಶರಣೆಂಬೆನನಾರತ ಭಕ್ತಿಯುಕ್ತಿಯಿಂ||

ಸ್ವಯಂ ಶಿವನೇ ವಾರಣಾಸಿ ಒಡೆಯನ ರೂಪದಿಂದ ಅವತರಿಸಿದನೆಂದು ಆತನ ಶಿಷ್ಯರು ಸ್ತುತಿಸಿರುವರು. ವೀರಶೈವ ಸಿದ್ಧಾಂತರಹಸ್ಯೋಪದೇಶಿಕನಾದ ಮಹಾಲಿಂಗ ದೇವರು ಜಕ್ಕಣಾರ್ಯನ ದೀಕ್ಷಾಗುರು. ಆತನಿಂದ ಪುರಾತರ ವಚನಾರ್ಥ ಹಾಗೂ ಸ್ಥಲಗಳ ಸ್ವರೂಪದ ಬೋಧೆಯನ್ನು ಪಡೆದ ಫಲವಾಗಿ ಜಕ್ಕಣಾರ್ಯನಿಂದ ಏಕೋತ್ತರ ಶತಸ್ಥಲಿ ರಚಿತವಾಯಿತು. ಷಟ್‌ಸ್ಥಲಬ್ರಹ್ಮಮೂರ್ತಿಯಾದ ಮಹಾಲಿಂಗದೇವರನ್ನು ಅಲ್ಲಮಪ್ರಭುವಿನೊಡನೆ ಸಮೀಕರಿಸಿ ಮಗ್ಗೆಯ ಮಾಯಿದೇವರು ತಮ್ಮ ಪ್ರಭುಗೀತೆ ಯಲ್ಲಿ ಸ್ತುತಿಸಿರುವ ಬಗೆಯಿದು.

ಅನಾದ್ಯಂತಂ ಜ್ಯೋತಿಪರಮಮಹಿಶಾನಂದವಿಭವಂ
ಮಹಾಲಿಂಗಂ ಯಸ್ಯ ಸ್ವಯಮನಿರತೋಪಾಸ್ಯಮಭವತ್
ಯದೈಕ್ಯಾವಸ್ಥಾಯಾಂ ವಿಹರತಿ ನಿಜೋಪಾಸಕತಯಾ
ಪ್ರಭುಂ ತಂ ವಂದೇಽಹಂ ವಿಮಲಬಹುಲಾನಂದಜಲಧಿಂ||

ಮಹಾಲಿಂಗದೇವರು ತಮ್ಮ ವಚನವ್ಯಾಖ್ಯಾನಗ್ರಂಥಗಳ ಆದ್ಯಂತಭಾಗಗಳಲ್ಲಿ ತಾವು ಪುಲಿಗೆರೆಯ ಪುರವರಾಧೀಶ್ವರರೆಂದೂ, ಚೆನ್ನದಕ್ಷಿಣ ಶ್ರೀ ಸೋಮನಾಥದೇವರ ದಿವ್ಯಶ್ರೀಪಾದಪದ್ಮಾರಾಧಕರೆಂದೂ ಹೇಳಿಕೊಂಡಿರುವುದನ್ನು ನೋಡಿದ್ದೇವೆ. ಲಕ್ಷ್ಮೇಶ್ವರವೆಂದು ಉತ್ತರಕರ್ನಾಟಕದಲ್ಲಿ ಪ್ರಸಿದ್ಧಿಯಾದ ಹುಲಿಗೆರೆಗಿಂತ ಬೇರೆಯಾದುದೆಂಬುದನ್ನು ಸೂಚಿಸುವುದಕ್ಕಾಗಿ 'ಚೆನ್ನದಕ್ಷಿಣ'ವೆಂಬ ವಿಶೇಷಣ ಇಲ್ಲಿ ಪ್ರಯುಕ್ತವಾಗಿದೆ. ಈ ಹುಲಿಗೆರೆ ಯಾವುದೆಂದರೆ ವೀರಕಂಪಣ ಒಡೆಯರಿಂದ ಹೊದೆನಾಡೊಳಗಣ ವಾರಣಾಸಿ ಯೆಂಬ ಪುರವನ್ನು ಮಠಪುರವಾಗಿ ಕೊಟ್ಟ ಬಗೆಗೆ ಶಾಸನೋಲ್ಲೇಖ (E. C. X Kolar dt. part ii K. L.205) ಇದೆ. ಮಹಾಲಿಂಗದೇವರ ಆರಾಧ್ಯದೈವ ಸೋಮನಾಥದೇವರು. ವ್ಯಾಘ್ರತಟಾಕವೇ ಇಂದಿನ–ವಾಗಟ್ಟ ಇಲ್ಲವೆ ವಾಗಟ. ಈ ವಾರಾಣಾಸಿ ಹಾಗೂ ಬಹುಶಃ ಪುಲಿಯೂರ ನಾಡಿಗೆ ಸೇರಿ ದೊಡ್ಡಕೆರೆಯಿಂದ ಹೆಸರುಗೊಂಡ ವಾಗಟಗಳೆರಡೂ ಬೆಂಗಳೂರಜಿಲ್ಲೆ ಹೊಸಕೋಟೆ ತಾಲೂಕಿಗೆ ಈಗ ಸೇರಿದ ಊರುಗಳು. ದಕ್ಷಿಣ ವಾರಣಾಸಿಯ ಸ್ವಯಂಭು ತ್ರಿಯಂಬಕದೇವನ ಪಾದ ಕಮಲಪೂಜಕನಾದ ಮಂಡಲಾಚಾರ್ಯ ಸಂಸಿದ್ಧ ಚಕ್ರವರ್ತಿ ಅಭಂಗ ರಾಹುತ್ತರಾಯ ಚಂದ್ರಭೂಷಣದೇವ ಒಡೆಯರೆಂಬ ಮಹಾಗುರುವರ್ಯರಿದ್ದ ಸಂಗತಿ ತಿಳಿದು ಬರುತ್ತದೆ. 1388ರ ಮತ್ತೊಂದು ಶಾಸನದಲ್ಲಿ ಶ್ರೀಜ್ಞಾನಶಕ್ತಿದೇವ ಸ್ಥಾನಿಕರ ಹೆಸರು ಬರುತ್ತದೆ.

ವಾಗಟದಲ್ಲಿ ಸೋಮನಾಥದೇವರ ದೇವಾಲಯವಿರುವುದರ ಬಗೆಗೆ ಕ್ರಿ. ಶ. 1377ರ ಶಾಸನವಿದೆ. ಜಗನ್ನಾಥನಾದ ಸೋಮನಾಥ ಶಿವನು ವ್ಯಾಘ್ರತಟಾಕ–ಹುಲಿಗೆರೆ–ವಾಗಟದಲ್ಲಿರುವನೆಂದೂ ಆ ಸೋಮನಾಥ ಆರಾಧಕರಾದ ಮಹಾಲಿಂಗಗುರು ದೂರ್ವಾಸನೆಂಬ ಗುರುವಿನ ಸಂಪ್ರದಾಯಕ್ಕೆ ಸೇರಿದವನೆಂದೂ ಜಕ್ಕಣಾರ್ಯನಿಂದಲೂ ತಿಳಿದುಬರುತ್ತದೆ. ವೀರಶೈವಶಾಸ್ತ್ರವನ್ನು ಶಿವನಿಂದ ಮೊದಲು ಗ್ರಹಿಸಿದವನು ನಂದಿಯೆಂದೂ ಆ ಶಾಸ್ತ್ರವನ್ನು ವ್ಯಾಖ್ಯಾನಮಾಡಲು ಶಿವನೆ ಬಸವ, ದಂಡೇಶ, ಪ್ರಭುರೂಪದಿಂದ ಅವತರಿಸಿದನೆಂದು ವಾರಣಾಸೀಶನು ಉಪದೇಶಿಸಿದ ತನ್ನ ವೀರಶೈವಶಾಸ್ತ್ರಗ್ರಂಥದಲ್ಲಿ ಜಕ್ಕಣಾರ್ಯನೆ ನಿರೂಪಿಸಿದ್ದಾನೆಂಬುದನ್ನು ಪ್ರಸ್ತುತ ಪ್ರಭುದೇವರ ಅಂಕಿತದ ಮೂಲಾರ್ಥವನ್ನು ವಿವೇಚಿಸಬೇಕಾದ ಈ ಸಂದರ್ಭದಲ್ಲಿ ಗಮನಕ್ಕೆ ತಂದುಕೊಳ್ಳುವುದಗತ್ಯ. ಶಿವನಿಗೆ ನಂದಿಮಾಕಾಳರನ್ನೂ ಮರೆಯುವಂತೆ ಮಾಡಿದವನು "ಗೊಗ್ಗೇಶ್ವರಾಲಯ"ದ ಮುರಜಗತಿಯ ಅಲ್ಲಿಮನೆಂಬುದನ್ನು ಮಾರ್ಮಿಕವಾಗಿ ಸೂಚಿಸಿರುವ ಕವಿ ಹರಿಹರನು ಧ್ವನಿಪೂರ್ಣವಾದ ಪದಪ್ರಯೋಗದಿಂದ ಕೂಡಿದ ವರ್ಣನೆಗೆ ಎತ್ತಿದ ಕೈ ಎಂಬುದನ್ನೂ ಮರೆಯುವಂತಿಲ್ಲ.

15ನೆಯ ಶತಮಾನದ ವೇಳೆಗೆ ಎಡೆಯೂರ ತೋಂಟದಸಿದ್ಧಲಿಂಗೇಶ್ವರರು ಸ್ವತಃ ವಚನಕಾರರಾಗಿ ಷಟ್‌ಸ್ಥಲಜ್ಞಾನಸಾರಾಮೃತವೆಂಬ ವಚನಗ್ರಂಥವನ್ನು ರಚಿಸಿದ್ದರೆ ಅವರ ಶಿಷ್ಯಪರಂಪರೆ ಸಂಪಾದನೆಯ ಬಗೆಯವರೇ ಆಗಿ ಹಿಂದಿನ ಹಾಗೂ ಅಂದಿನ ಸಮಕಾಲೀನ ವಚನಕಾರರ ವಚನಗಳನ್ನು ಸಂಗ್ರಹ ರೂಪದಲ್ಲಿ ಪ್ರಚುರಗೊಳಿಸಿದರು. ಗುಬ್ಬಿಮಲ್ಲಣ್ಣಗಳು ವೇದಾಗಮೋಪನಿಷತ್ ಪುರಾಣಾದಿಗಳ ಸಂಸ್ಕೃತ ಶ್ಲೋಕಗಳ ಆಧಾರದಿಂದ ಆದ್ಯರ ವಚನಗಳನ್ನೂ ವರ್ತಮಾನಾನುಭಾವಿಗಳ ಅನುಭವದ ಹಿನ್ನೆಲೆಯಲ್ಲಿ 101 ಸ್ಥಲವಿಂಗಡನೆಯುನ್ನುಳ್ಳ ಗಣಭಾಷ್ಯರತ್ನಮಾಲೆಯೆಂಬ ಅಮೂಲ್ಯ ಗ್ರಂಥವನ್ನು ರಚಿಸಿದರು.

ಈ ಜಗತ್ತಿನಲ್ಲಿ ಭಕ್ತಿ, ಜ್ಞಾನ, ವೈರಾಗ್ಯದ ಆಚರಣೆಯಿಂದ ಜೀವರು ಮುಕ್ತರಾಗಲೆಂಬುದೇ ಆಶಯವಾಗುಳ್ಳ ಈ ಮಹನೀಯರು ರಚಿಸಿದ ಮೂಲತಾಡೋಲೆ ಗ್ರಂಥಗಳಲ್ಲಿ ಉದ್ಧೃತವಾದ ಪ್ರಭುದೇವರ ವಚನಗಳಲ್ಲಿ ಕಂಡುಬರುವ ಅಂಕಿತಗಳ ಅಕ್ಷರಸಂಯೋಜನೆಯನ್ನು ಇಲ್ಲಿ ಉದ್ಧರಿಸಬಹುದಾಗಿದೆ. ಪ್ರಭುದೇವರ 'ಷಟ್‌ಸ್ಥಲದ ವಚನ'ದ ಟೀಕಿನ ಗ್ರಂಥದಲ್ಲಿ 'ಗೊ ಹೆ ಶ್ವರ' (=ಗೋಹೇಶ್ವರ) ಎಂದೂ, 'ಏಕೋತ್ತರಶತಸ್ಥಲ' ವಚನಗ್ರಂಥದಲ್ಲಿ 'ಗೊ ಗೆ ಶ್ವರ' (= ಗೋಗೇಶ್ವರ) ಮತ್ತು 'ಗೋಹೆ ಶ್ವರ'(=ಗೋಹೇಶ್ವರ) ಎಂದೂ ಎರಡೂ ಬಗೆಯ ಶಬ್ದರೂಪರೇಖೆಗಳೂ ಕಂಡುಬಂದಿವೆ. ಅವರ ಈ ಎರಡು ಮೂಲಗ್ರಂಥಗಳ ಪರಂಪರಾಗತ ಪ್ರತಿಗಳಲ್ಲಿ ಭಕ್ತಿ ಭಂಡಾರಿ ಜಕ್ಕಣಾರ್ಯನ ಉಪದೇಶಾರ್ಥವಾಗಿ ಅವು ರಚಿತಗೊಂಡುದಾಗಿ ಪ್ರಕಟಿಸಿರು

ವುದನ್ನು ಕಾಣಬಹುದು. ಮಹಾಲಿಂಗದೇವರ ಪೂರ್ವಾನ್ವಯ ಗುರುಪರಂಪರೆಯುನ್ನುಳ್ಳ ಆ ಪ್ರತಿಗಳು ಅಧಿಕೃತ ಬರವಳರಿಂದಲೇ ಲಿಖಿತಗೊಂಡಿವೆ ಎಂಬುದು ಗಮ್ಯ. ಶುದ್ಧ ಪ್ರತಿಯು ಪಾಠಸಂಪ್ರದಾಯದ ವಿಶ್ವಾಸಾರ್ಹಪ್ರತಿಗಳ ವರ್ಗಕ್ಕೆ ಸೇರಿದವು ಎಂಬುದಕ್ಕೆ ಕಟ್ಟಿಗೇಹಳ್ಳಿ ಸ್ವಾಮಿಗಳ ಒಂದು ಪರಂಪರಾಗತಪ್ರತಿಯ ಗ್ರಂಥಾಂತಲೇಖವೇ ಸಾಕ್ಷಿ.

ಪ್ರಭುದೇವರ ಟೀಕಿನ ವಚನವೆಂದೇ ಹೆಸರಾದ ಮಹಾಲಿಂಗದೇವರ ವ್ಯಾಖ್ಯಾನ ಗ್ರಂಥದ ಹಲವಾರು ಪ್ರತಿಗಳನ್ನು ಹೋಲಿಸಿ ನೋಡಿದಾಗ ಏನೇನೂ ಪಾಠಭೇದವಾಗಲಿ, ಪಾಠಾಂತರವಾಗಲಿ ಇಲ್ಲವೆಂಬಷ್ಟು ಏಕತೆ ಇರುವುದನ್ನು ಕಂಡಾಗ ಆ ಗ್ರಂಥಪಾಠಗಳ ಪ್ರಾಮಾಣ್ಯದ ರಕ್ಷಣೆಯಾಗಿರುವುದು ಮನವರಿಕೆಗೆ ಬಾರದೆ ಇರದು. ಆ ಗ್ರಂಥಾಂತ್ಯದ ಲೇಖವಿದು: "ಸಾಧಾರಣ ಸಂವತ್ಸರದ ಮಾರ್ಗಶಿರ ಶುದ್ಧ ಬುಧವಾರದಲು ನಿಷ್ಕಲ ಪರಶಿವನಪರಾವತಾರ ಪರಮಸುಖವಹಾ ಲೀಲಾವಿಲಾಸಮೂರ್ತಿ ಮಹಾಮಹೇಶ್ವರನ ನಿಜ ಚಿನ್ಮಯಸ್ವರೂಪರಾದ ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿಗಳಿಗೆ ಪಂಚಾಕ್ಷರೀ ದೇವರು ತಮ್ಮ ಭಕ್ತಿವಿಶ್ವಾಸ ತಾತ್ಪರ್ಯದಿಂದ ಟೀಕು ವಿಲಾಸ ಏಕೋತ್ತರಸಾರ ಬೆಡಗು ಮೊದಲಾದ ಶಾಸ್ತ್ರಗಳನು ಬರದು ಸಂಪೂರ್ಣವನೆಯ್ದಿಸಿದರೂ| ಲೇಖಪಾಠಕಯೋ ಭೂರ್ಯಾತ್ ಶ್ರೀ ಶ್ರೀ ಶ್ರೀ"

ಆಧ್ಯಾತ್ಮಿಕ ಶಾಸ್ತ್ರಗ್ರಂಥಗಳ ಬಗೆಗೆ ಲಿಪಿಕರು ಇಡಬೇಕಾಗಿದ್ದ ಹಾಗೂ ಇಟ್ಟಿದ್ದ ಶ್ರದ್ಧಾಭಕ್ತಿಗಳಿಗೆ ಹಿಡಿದ ನುಡಿಗನ್ನಡಿ ಪಂಚಾಕ್ಷರೀದೇವರ ಈ ಗ್ರಂಥಸಮಾಪ್ತಿ ವಾಕ್ಯ. ಲೇಖಕಪಾಠಕರು ಇದೇ ಭಕ್ತಿವಿಶ್ವಾಸಗಳಿಂದ ಬರೆದು ಓದಲಿ ಎಂಬ ನಿರೀಕ್ಷೆಯ ಆದರ್ಶ ಇಂದಿನ ಹಾಗೂ ಮುಂದಿನ ಜನಾಂಗಕ್ಕೆ ಹಿಡಿದು ತೋರಿದ ಕೈಗನ್ನಡಿ.

ಪ್ರಸ್ತುತ ಕಟ್ಟಿಗೆಹಳ್ಳಿಯ ಓಲೆಕಟ್ಟಿನಲ್ಲಿರುವ ಲಿಂಗಲೀಲಾವಿಲಾಸ ಚಾರಿತ್ರ ದಲ್ಲಿಯೂ 'ಗೊ ಹೆ ಶ್ವ ರ'-(ಲಿಖಿತಪಾಠ) = 'ಗೋಹೇಶ್ವರ'-ವಾಚನಪಾಠವಾಗಿಯೇ ಆಯಾ ವಚನ ಹಾಗೂ ವ್ಯಾಖ್ಯಾನಭಾಗಗಳಲ್ಲಿಯೂ ದೀರ್ಘಸ್ವರಸೂಚಕ ರೇಖಾ ಕೃತಿಯೇ ಇದ್ದು ಅದು ಅಂಕಿತದ ಪಾಠವನ್ನು ದೀರ್ಘಸ್ವರ ಸಮೇತ ಅಧ್ಯಾಹಾರ ಪಾಠ ಕ್ರಮದಿಂದ ಓ, ಏ, ಈ-ಕಾರಗಳ ಮೇಲಣ ಕೊಂಬು, ಎತ್ವದ ಸುಳಿ ಹಾಗೂ ಗುಡಿಸು ಇವುಗಳೊಳಗೆ ದೀರ್ಘಸ್ವರಸೂಚಕವಾಗಿ ಬರುವ ಒಳಸುಳಿಯ ಬಾಗು, ವೃತ್ತಾಭಿಮುಖ ಅಂತಃಪ್ರವಣಶೀಲ ರೇಖಾವಿನ್ಯಾಸದ ರಚನೆಯಿಂದ ಲಿಪೀಕರಿಸುವ ಲಿಪಿಜ್ಞರ ಕರ ಕೌಶಲವನ್ನು ಕಣ್ಣಿಟ್ಟು ಗಮನಿಸದಿದ್ದಲ್ಲಿ ಓದುಗನು ಇರುವ ಪಾಠವನ್ನು ತಪ್ಪಾಗಿ ಗ್ರಹಿಸುವ ಸಾಧ್ಯತೆಯೇ ಹೆಚ್ಚು. ತಾವು ಮಾಡಬೇಕಾದ ಊಟವನ್ನು ತಾವೇ ಮಾಡಬೇಕಲ್ಲದೆ, ಇತರರು ಮಾಡಿದ ಊಟದಿಂದ ಉಂಡ ಸುಖ ಎಂದಿಗೂ ತಮ್ಮ ಹಸಿವನ್ನು ಹೇಗೆ ನೀಗಿಸದೋ ಹಾಗೆ, ಅನ್ಯರಿಂದ ಸಿದ್ಧವಾದ ಕೈಬರಹದ ಮೇಲುನೋಟ ದಿಂದ ನಿಜಪಾಠದ ಸುಳಿವು ಸಂಪಾದಕರ ಕಣ್ತಪ್ಪಿ ಹೋಗುವುದುಂಟು. ಉಂಡ

ಊಟದ ಆ ಸವಿಯಿಂದಲೂ ವಂಚಿತರಾಗುವರು. ವಾಸ್ತವವಾದ ಶುದ್ಧ ಪಾಠದ ಬದಲು ಓದುಗನ ಅಜಾಗರೂಕತೆಯಿಂದ ಆದ ತಪ್ಪುಪಾಠವೇ ಜನಬಳಕೆಗೆ ಬಂದು ಅಪಪಾಠಕ್ಕೆ ದಾರಿಮಾಡಿಕೊಟ್ಟಂತಾಗುತ್ತದೆ.

ಸಂಶೋಧನಕೋಟಿಯ ಲಿಂಗಲೀಲಾವಿಲಾಸಚಾರಿತ್ರದ ತಾಡೋಲೆಯಲ್ಲಿನ ಪಾಠವನ್ನೇ ಮುದ್ರಿತ ಗ್ರಂಥ (ಸಂ. ಶಿ. ಭೂಸನೂರಮಠ-1956ರ ಧಾರವಾಡದ ಪ್ರಕಟಣೆ) ಹೇಳುತ್ತಿದ್ದರೂ ಅಂಕಿತಮಾತ್ರ 'ಗೋಹೇಶ್ವರ'ದ ಬದಲು 'ಗೊಹೇಶ್ವರ' ವಾಗಿ ಹೋಗಿರುವುದಕ್ಕೆ ಕಾರಣವೇನೋ ತಿಳಿಯದು. ಬಹುಶಃ ನಡೆವರೆಡಹದೆ ಕುಳಿತರೆ ಡಹುವರೆ ? ಮರಹುವಾಲಸ್ಯವೆಡೆಗೊಳಲು (ಓದುಗನು) ತಪ್ಪುಗಲ್ಲದೆ ಕಾವ್ಯ(ವಚನ) ಕರ್ತೃ ತಪ್ಪುವನೇ ? ಎಂಬ ನುಡಿಯನ್ನು ಮರೆಯಲಾಗದು. ಒಮ್ಮೆ ಮುದ್ರಣ ಕಂಡ ಪಾಠವನ್ನು ಸಾಧಾರಣವಾಗಿ ಮೂಲದೊಡನೆ ತಾಳೆ ನೋಡುವ ಗೋಜಿಗೆ ಎನ್ನುವ ಬದಲು, ಪ್ರತ್ಯಕ್ಷವಾದರೂ ಪ್ರಮಾಣಿಸಿನೋಡು ಎಂಬ ಸತ್ಯಾನ್ವೇಷಣ ದೃಷ್ಟಿ ಓದುಗರಲ್ಲಿ ಕಣ್ಮರೆಯಾಗುವುದೇ ಲೋಕರೂಢಿ. ಅದರ ಚಿಂತೆ ಇರಬೇಕಾದುದು ಬರಹ ಬಲ್ಲವರಲ್ಲಿ. ಒಮ್ಮೆ ಒಬ್ಬರಿಂದ ಆಕಸ್ಮಿಕವಾಗಿ ಆದ, ಅಚ್ಚಿನ ಮೊಳೆ ಕಂಡ 'ಗೊಹೇಶ್ವರ' ಎಂಬ ಅಂಕಿತ ತನ್ನ ಅಪರೂಪದಿಂದ ಮುಕ್ತವಾಗಲು ಇಷ್ಟೊಂದು ಸಮಯಬೇಕಾಯಿತೇ ಎಂದರೆ 'ಕಾಲಾಯ ತಸ್ಮೈ ನಮಃ' ಎಂಬುದೊಂದೇ ಅದಕ್ಕೆ ಉತ್ತರ. ಕಾಲಚಕ್ರದ ಗತಿಯಲ್ಲಿ ಒಂದು ಶಬ್ದರೂಪ ಬೇರ್ಪಟ್ಟು ಬೇರೂರಿದಮೇಲೆ ಯಾವುದು ಸರಿ ಯಾವುದು ತಪ್ಪು ಎಂಬುದರ ವಿವೇಚನೆ ಜನಪರ ಆವೃತ್ತಿಗಳ ಸಂಪಾದಕ ಕೂಟಗಳಿಗೆ ಅಪ್ರಸ್ತುತವೆನಿಸಿದರೂ ಆಶ್ಚರ್ಯವಿಲ್ಲ. ಹೆತ್ತವರಿಗೆ ಹೆಗ್ಗಣ ಮುದ್ದು ಎಂಬಂತೆ ಒಪ್ಪವಿಲ್ಲದಿದ್ದರೂ ಅಪ್ಪಿಕೊಂಡ ಶಬ್ದರೂಪದ ಚಿಂತನೆಗೆ ಮನಸ್ಸಾದರೂ ಹೇಗೆ ಬಂದೀತು ? ಇದು ಸಹಜ. 'ಲೋಕಾರೂಢೀ ಬಲೀಯಸೀ' ಎಂಬಂತೆ.

ಆದರೆ ಸಂಪಾದಕರೆನಿಸಿಕೊಂಡವರು ಒಂದಂಶವನ್ನು ಮಾತ್ರ ಮರೆಯುವಂತಿಲ್ಲ. ಏನೆಂದರೆ ಬದಲಾದ ಅಂಕಿತದ ಶಬ್ದಾರ್ಥವು ಮೂಲ ಅಂಕಿತದ ಅರ್ಥಕ್ಕೆ ಮಸಿಬಳಿಯು ವಂತಿರಬಾರದು. ವಚನಕಾರರ ಮೂಲಾರ್ಥಪಆಶಯವೇ ಜನರಿಗೆ ತೋಚದಂತಾದಲ್ಲಿ ಅವರ ಅನುಭವದ ಸಾರಸಂಪನ್ನತೆಗೇ, ಆ ತೇಜೋಜ್ಜ್ವಲ ದೀರ್ಘಾಂತರಂಗದ ಆಚರಣೆಯ ಶಿವಸಂಬಂಧಕ್ಕೇ ಧಕ್ಕೆಯುಂಟಾದಂತಾಗುತ್ತದೆ. ಸಂಶೋಧನೆಯ ನಿಜಾನುಭವದ ಪ್ರಕ್ರಿಯೆಗೇಮಾರಕ. ಆ ಕಾರಣ ಇಲ್ಲಿ ಇರುವ ಪ್ರಶ್ನೆ ಅಂಕಿತದ ಚಾಕ್ಷುಷಮಾತ್ರವಾದ ಬೈರೂಪದ ವಿಚಾರವಲ್ಲ: ಅದರ ಅಂತರಾರ್ಥದ ಹಿನ್ನೆಲೆಯ ಪ್ರಶ್ನೆ; ಸತ್ಯ ಸಂಗತಿಯ ನಿರೂಪಣೆಯ ಪ್ರಶ್ನೆ; ಶಬ್ದದ ಹೊರರೂಪ ಅದರ ಒಳಗಿನ ಅರ್ಥವನ್ನು, ಧಾತುವಿನೊಳಗಾದ ಮಾತಿನ ಮರ್ಮವನ್ನು ಧ್ವನಿಸುತ್ತದೆಯೇ ಎಂಬುದರ ಪ್ರಜ್ಞೆಯ, ಅರಿವಿನ ಪ್ರಶ್ನೆ.

ಆ ಅರಿವಿನ ಕಡೆಗೆ ನಮ್ಮ ಮನಸನ್ನು ಸೆಳೆದಿರುವ ಅಲ್ಲಮನ ಅಂಕಿತದ ಪಾಠವೊಂದನ್ನು ಅನ್ಯ ಆಕರಗ್ರಂಥಗಳಲ್ಲೊಂದಾದ ಗಣಭಾಷ್ಯರತ್ನಮಾಲೆಯ ಓಲೆಯ ಕ್ರಿ.ಶ. 1578ರ ಪ್ರತಿ (ಓಲೆ ೩೬. ವಚನ ೩) ನೀಡಿ ನಮ್ಮ ಮನಸ್ಸಿಗೆ, ಅಂ ಕಿ ತ ದ ಮೂಲಾರ್ಥದ ವಿಶ್ಲೇಷಣೆಗೆ ಸಾಮಗ್ರಿಯನ್ನೊದಗಿಸಿದೆ. ಸರ್ವಗತನಿರಸನ ಸ್ಥಲದ 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ಶ್ರುತಿ ಹುಸಿ. ಶಿವನಿದ್ದ ಠಾವಿಂಗೆ [m ಜ್ಞಾನವೇ ಒಡಲಾದ ಶೂನ್ಯಕ್ಕೆ] ಪ್ರಳಯವುಂಟೇ ? ಎಂದು ಆರಂಭವಾಗುವ ವಚನವು "ಸದ್ಭಕ್ತಿ ಸದಾಚಾರವೆಲ್ಲಿಪ್ಪುದು ಅಲ್ಲಿಪ್ಪುದಲ್ಲದೆ ಮತ್ತೆಲ್ಲಿಯೂ ಇಲ್ಲ ಕಾಣಾ ನಮ್ಮ 'ಗೊ ಗ್ಗೆ ಶ್ವರಲಿಂಗವು.' ಎಂದು ಮುಕ್ತಾಯವಾಗುತ್ತದೆ. ಈ 'ಗೋಗ್ಗೇಶ್ವರ' ಎಂಬ ಶಬ್ದರೂಪವು ಹರಿಹರನ ಗೊಗ್ಗೇಶ್ವರ ಪದಪ್ರಯೋಗದ ಪೂರ್ವಾನ್ವಯ ಪಾಠದಂತಿದೆ. ಅಲ್ಲದೆ ಇಡೀ ವಚನಾರ್ಥವು Man is the gateway of God." ಎಂಬ ಆಂಗ್ಲ ವಾಣಿಯನ್ನು ನೆನಪುಮಾಡಿಕೊಡುತ್ತದೆ.

ಗಣಭಾಷ್ಯರತ್ನಮಾಲೆಯ ಮೇಲಣ ಪಾಠಾಂತರದ ಹಿನ್ನೆಲೆಯಲ್ಲಿ

"ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯಂ ತಂದು
ಹಿಗ್ಗುತ್ತಲಿಕ್ಕಿದಳು ಜನನಿ ನೇಹದಲಂದು"

ಇಲ್ಲಿ ಪ್ರಾಸಸ್ಥಾನದಲ್ಲಿ 'ಗ'ಕಾರದ್ವಿತ್ವವೇನೋ ಉಂಟು. ಆದರೆ ಆ ಪ್ರಾಸಾಕ್ಷರದ ಹಿಂದಿನ ಅಕ್ಷರಗಳು ಹ್ರಸ್ವವಾಗಿರಬೇಕೆ ? ದೀರ್ಘವಾಗಿರಬೇಕೆ ? ಎಂಬ ಪ್ರಶ್ನೆ ಮೇಲಣ ಉಪಲಬ್ಧ ಪಾಠದಿಂದ ಸಹಜವಾಗಿ ಏಳುತ್ತದೆ. 'ಗೋಗ್ಗೇಶ್ವರ' ಪಾಠವೇ ಕವಿಪಾಠವಾಗಿದ್ದಲ್ಲಿ ಅದರ ಮುಂದಿನ ಸಾಲಿನ 'ಹಿಗ್ಗು'ತ್ತಲಿಕ್ಕಿದಳು ಎಂಬ ಪಾಠ ಸ್ವರ ಸಾಮ್ಯ ಹಾಗೂ ಅರ್ಥ ದೃಷ್ಟಿಯಿಂದ ಸಮಂಜಸವಲ್ಲ ಎನ್ನಲು ಅವಕಾಶವುಂಟು. ಹಾಗಾದರೆ 'ಹೀಗ್ಗು'ತ್ತಲಿಕ್ಕಿದಳು ಎಂದಿದ್ದು ಸಹಜ ದೀರ್ಘಸ್ವರಸಹಿತವಾದ 'ಹೀಗ್ಗು' ಪದವೆ ಸ್ವೀಕಾರಾರ್ಹವೆಂದು ಪರಿಗಣಿಸಬೇಕಾಗುತ್ತದೆ. ಅದರ ನಿಷ್ಪತ್ತಿ ಹೀಗೆಂದು ತೋರುತ್ತದೆ. ಪೀಕರ್ಱ > ಪೀಗರ್ಱ > ಹೀಗ್ಗು. 'ಪೀಚುರ್ಱ' (ಪದವುಂಟು) < ಪೀಕರ್ಱ, ಹೋ : ಕೆಪ್ಱ > ಚೆಪ್ಱ (ಕ > ಚ). ಪೀಕರ್ಱ > ಪೀಗರ್ಱ > ಹೀಗರ್ಱ > ಹೀಗ್ಗು ಆಗಿದೆಯೆಂದು ಹೇಳಲು ಕನ್ನಡ ಹಾಗೂ ತಮಿಳಿನ ಭಾಷಾಶಾಸ್ತ್ರದ ನುಡಿನಳಿಯಲ್ಲಿನ ನಡೆವಳಿಯೆನ್ನಲಡ್ಡಿಯಿಲ್ಲ. ಅಲ್ಲದೆ 'ಹಿಗ್ಗು' 'ಹೀಗ್ಗು' ಪದಗಳಿಗೆ ಮೂಲತಃ ಅರ್ಥ ವ್ಯತ್ಯಾಸವಿಲ್ಲದಿಲ್ಲ. ಆದರೆ 'ಹೀರು' ಎಂಬರ್ಥದಲ್ಲಿನ ಹೀಗ್ಗು ಪದ 'ಹಿಗ್ಗು' ಆಗಿ ಮಾರ್ಪಟ್ಟಿರುವುದು. ಸಂದರ್ಭೋಚಿತವಾಗಿ ವಾಡಿಕೆಯಲ್ಲಿ ಹೀರು ಎಂಬ ಪ್ರಾದೇಶಿಕ ಅರ್ಥವೂ ಅವಕ್ಕುಂಟು. ಹಿಗ್ಗು ಪದಕ್ಕಿರುವ ನಾನಾರ್ಥಗಳಲ್ಲಿ ಅದೂ ಒಂದೆಂಬುದು ಗಮನಾರ್ಹ. ನೇಹದಿಂದುಂಟಾಗುವ 'ಹಿತರಸಸ್ವೀಕಾರ'ದ ಸವಿ ಪೀರ್, ಪೀಗರ್ಱ, ಪೀಚುರ್ಱ, ಪೀದುರ್ಱ ಪದಗಳಲ್ಲಿರುವಂತೆ 'ಹಿಗ್ಗು' ಪದದ ಉಚ್ಚಾರದಿಂದ (ಹೋ 'Memories flooded one's being.' "ಅಮಲೋದ್ಭವ ಮಾಡು"

ಎಂಬರ್ಥ–ಹ. ಶೂ. ಪ. ೧೧೫೮) ಧ್ವನಿತವಾಗದು. ಆ ಪದದ ಸೇಹದ ಸವಿಯ ವ್ಯಾಪಕತೆ 'ಹಿಗ್ಗು' ಪದದಲ್ಲಿ ಕುಗ್ಗಿಹೋಗಿದೆ ಎಂಬುದು ರಸಾಸ್ವಾದನೆಯ ರಸನೆಗೇ ಗೊತ್ತು ಎಂಬುದನ್ನು ಒಪ್ಪಬೇಕಾಗುತ್ತದೆ. ಸೃಜನಶೀಲ ಜನಪದದ ದೈವೀಸನ್ನಿಕಟ ಸಾನ್ನಿಧ್ಯದಿಂದ ವೈದೋರಿದ ಭಕ್ತಿಭಾವಭರಿತ ಕವಿತಾರಸಾಭಿವ್ಯಕ್ತಿಯ ಗೇಯಗುಣದ ಈ 'ಗೋಗ್ಗೇಶ್ವರ'ಪಾಠ ಬಿಜಾಪುರ ಜಿಲ್ಲೆಯ SII No XX166. ಕ್ರಿ.ಶ. 1176 ಆ ರೂಗಿ ಶಾಸನದ ಅದ್ವಿತ್ವಲೇಖಕ್ರಮದ 'ಗೋಗೇಶ್ವರ'ಪಾಠಕ್ಕೆ ಮೂಲವಾಗಿರಲು ಸಾಧ್ಯ. "ಈ ಗೋಗೇಶ್ವರದೇವರೂ ಅಲ್ಲಮನ ಆರಾಧ್ಯದೈವವೂ ಬೇರೆ ಎಂಬುದು ಸ್ಪಷ್ಟವಾಗಿದೆ"– (ಸಂಶೋಧನ ತರಂಗ ಸಂ 2–ಪು. 155) ಎಂಬ ಹೇಳಿಕೆಗೆ ಯಾವ ಆಧಾರವೂ ಇಲ್ಲ ಎಂಬುದನ್ನು ಈಗಾಗಲೇ ಹಿಂದೆ ತಿಳಿಸಿದ್ದಾಗಿದೆ.

ಗೋಗೇಶ್ವರ ಇಲ್ಲವೆ ಗೊಗ್ಗೇಶ್ವರ ಪದಗಳ ಮೂಲಾರ್ಥವನ್ನು ವಚನಕಾರರ ವಚನಗಳಲ್ಲಾಗಲಿ, ಹರಿಹರನ ರಗಳೆಯಲ್ಲಾಗಲಿ ಕಂಡುಕೊಂಡಲ್ಲಿ ಗೋಗೇಶ್ವರದೇವರು ಜಗಕೆ ಇಬ್ಬರಲ್ಲ, ಒಬ್ಬನೇ ಎಂಬುದು ಅಂಗೈಯನೆಲ್ಲಿಯ ಕಾಯಂತೆ ನಿಸ್ಸಂದೇಹ, ನಿರ್ವಿವಾದ. ಗೊಗ್ಗೇಶ್ವರ/ ಗೋಗೇಶ್ವರ ಪದಗಳನ್ನು ಬಿಡಿಸಿ ನೋಡೋಣ. ಗೊಗ್ಗ + ಈಶ್ವರ / ಗೋಗ + ಈಶ್ವರ. ಎರಡು ಪದಗಳು ಕೂಡಿ ಒಂದೊಂದು ಸಮಸ್ತ ಪದವಾಗಿವೆಯಷ್ಟೆ. 'ಗೊಗ್ಗ' ಪದಪ್ರಯೋಗ ಗುಮ್ಮ ಎಂಬರ್ಥದಲ್ಲಿ ಬಾಲಕರನ್ನು ಬೆದರಿಸಲು ಬಳಸುವ ಪದವಂತೂ ಅಲ್ಲ. ಗೊಗ್ಗೇಶ್ವರಾಲಯದ ದೈವ ಗುಮ್ಮ ಎಂಬರ್ಥದ ಗೊಗ್ಗನಲ್ಲ. ಗಿರಿಜೇಶ, ಶಂಭು, ಶಂಕರ ಎಂಬುದನ್ನು ಹರಿಹರನು ಸ್ಪಷ್ಟ ಪಡಿಸಿದ್ದಾನೆ. ಹಾಗಾದರೆ ಗೊಗ್ಗ ಪದದ ಅರ್ಥವೇನು ? ಅದರ ನಿಷ್ಪತ್ತಿ ಹೇಗೆ ? 'ಗೋಗ್ಗೇಶ್ವರ' ಪದ ತನ್ನ ದ್ವಿತ್ವದ ಗಕಾರವನ್ನು ಕಳೆದುಕೊಂಡು ಕಾಲಕ್ರಮದಲ್ಲಿ ಜನರು ಮಾತಾಡುವಾಗ 'ಗೋಗೇಶ್ವರನಾಗುವುದು ಸಹಜ. ಅಕ್ಕುಂ > 'ಅಕುಂ' ಆದಂತೆ. ಲಿಪಿಕಾರರ ಅದ್ವಿತ್ವ ಲೇಖನ ಪದ್ಧತಿಯಿಂದ ಸ್ವಾಭಾವಿಕವಾಗಿ ಆದ ಲಿಖಿತರೂಪ. ಗೋಗ್ಗೇಶ್ವರ/ಗೋಗೇಶ್ವರ–ಈ ಎರಡೂ ವೃಷಭೇಶ್ವರ, ಬಸವೇಶ್ವರ, 'ವೃಷಭಾಂಕಿತ ಶಿವ' ಎಂಬರ್ಥದ ಸಮಾನಪಾಠಗಳೇ ಹೊರತು ಭಿನ್ನಾರ್ಥಕ ಪಾಠಗಳಲ್ಲ. ವಚನಗಳಲ್ಲಾಗಲಿ, ಹರಿಹರನ ರಗಳೆಯಲ್ಲಾಗಲಿ ಭಿನ್ನಾರ್ಥಕ ಪದಪ್ರಯೋಗಗಳಾಗಿಲ್ಲ. ಪೂರ್ವೋಕ್ತ ಶಾಸನದ 'ಗೋಗೇಶ್ವರ'ವೇ 'ಗೊಗ್ಗೇಶ್ವರ'ವಾಗಿ (ಹೋ, ಗೋಷ್ಠಿ > ಗೊಟ್ಟ ; ಕೋಷ್ಟಕ > ಕೊಟ್ಟಗೆ; ಶ್ರೇಷ್ಠಿ > ಸೆಟ್ಟಿ) ಶಿವನು ಬೇರೆಯಲ್ಲ. ಅವನ ವಾಹನ ಬೇರೆಯಲ್ಲ; ವೃಷಭನಾಮ ಶಿವ, ಎಂಬರ್ಥದಲ್ಲಿ ಬಳಕೆಯಲ್ಲಿದ್ದ ಪದ. ಗೋ + ಗ ಅರ್ಥಾತ್ ವೃಷಭಗಮನ, ವೃಷಭವಾಹನನಾದ ಗಿರಿಜೇಶ ಎಂಬರ್ಥ ಸೇರಿರುವುದೂ ಆ ಪದದ ಕ್ಲಿಷ್ಟತೆಗೆ ನಿದರ್ಶನ.

'ಗ'ಕಾರಕ್ಕೆ ಉತ್ತಮ, ಪ್ರೀತ ಎಂಬರ್ಥವಿರುವುದರಿಂದ ಗೋಗ ಪದಕ್ಕೆ ಗೋ ಪ್ರೀತ, ವೃಷಭ ಪ್ರೀತ–ವೃಷಭನಿಂದ ಪ್ರೀತ ಇಲ್ಲವೆ ಸಂತುಷ್ಟನಾದವನು ಶಿವ ಎಂಬರ್ಥ.

ಗೋಗಗ (ಹೋ; ಚೋಡಗ<ಚೋಡ್ಗ)> ಗೋಗ್ಗ ಪದಕ್ಕೆ ಗೋಪ್ರೀತೋತ್ತಮ ನೆಂಬುದು ಕಾಣಬಂದರ್ಥ. ಈ ಅರ್ಥದ್ಯೋತಕವಾದ, ಧ್ವನಿಪೂರ್ಣವಾದ ಪದ ವೆಂದರೆ ಹರಿಹರನು ನಿರ್ದೇಶಿಸಿರುವ 'ವೃಷಭಾಂಕಿತ ಶಿವಾಲಯು'ದ ನಾಮಾಂಕಿತ. ಹರಹರನು ಆ ದೇಗುಲವನ್ನು ಗುಹಾಲಯುವೆಂದಾಗಲಿ, ಅಲ್ಲಿನ ಮಹಾಲಿಂಗವ (ಅವಯುವಂ ಕರಚರಣವಿಲ್ಲದವ್ಯಕ್ತತತ್ತ್ವ, ಗೋಳಕಾಕಾರ ತೇಜೋಮೂರ್ತಿಯು)ನ್ನು ಗುಹೇಶ್ವರಲಿಂಗವೆಂದಾಗಲಿ ಹೆಸರಿಸಿಲ್ಲವೆಂಬುದನ್ನು ನಾವಾರೂ ಮರೆಯುವಂತಿಲ್ಲ. ಆದರೂ ಅಲ್ಲಮನೂ ಆಕಸ್ಮಿಕವಾಗಿ ಕಂಡದ್ದು 'ಗುಹೆ' ಅವನು ಪ್ರವೇಶಿಸಿದ್ದು 'ಗುಹಾ ದೇವಾಲಯು' ವೆಂದು ಹರಿಹರನು ವರ್ಣಿಸಿದ್ದಾನೆ–ಪುಟ 175, ಸಂಶೋಧನ ತರಂಗ 2ರ ಈ ಹೇಳಿಕೆಗೆ ಬೇರೊಂದು ಲೇಖನಕ್ಕೆ ಆಕರವಾಗಿ ಕೊಟ್ಟಿರುವ ಶ್ರೀಫ ಗು. ಹಳ ಕಟ್ಟಿಯವರ ಪ್ರಭುದೇವರ ರಗಳೆಯುಲ್ಲಿ ಸಮರ್ಥನೆಯಿಲ್ಲ. ವಚನಕಾರರೇ ಪ್ರಕಟಿಸಿರು ವಂತೆ ಅದು ಮಣ್ಣಮಜ್ಜಿಯು ದೇಗುಲ, ತಲಕಾಡಿನ ಕಾವೇರೀ ನದೀತೀರದ ಮರಳಿನಲ್ಲಿ ಹೂತುಕೊಂಡಿರುವ ಪಂಚಲಿಂಗೇಶ್ವರ ದೇವಸ್ಥಾನಗಳಂತೆ ; ಗಿರಿನಿವಾಸಸ್ಥಾನವಾದ ಗುಹೆಯ ದೇಗುಲವಲ್ಲ. ಹರಿಹರನು ಅದನ್ನು 'ನೃಷಾಂಕಿತ ಶಿವಾಲಯು'ವೆಂದೇ ಹೆಸರಿಸಿದ್ದಾನೆ, ಮಣ್ಣ ಮಜ್ಜಿಯುದೇಗುಲನನ್ನು ಗುಹಾದೇವಾಲಯುವೆಂದು ತಿಳಿದ ವರ ತಪ್ಪುಕಲ್ಪನೆಯಿಂದ ಅಲ್ಲಮನ ವಚನಗಳ ಅಂಕಿತ 'ಗುಹೇಶ್ವರ' ಎಂದೆಂಬ ಭಾವನೆ ಬೇರೂರಿ ಕೊಂಡುದು ಇದರಿಂದ ಸ್ಪಷ್ಟವಾಗುತ್ತದೆ.

'ಪ್ರೀತ' ಎಂಬ ಅರ್ಥಾನ್ವಯುಸೂಚಕವಾಗಿ ವಚನಕಾರರು ತಮ್ಮ ವಚನಗಳಲ್ಲಿ ಬಳಸಿ, ತಾಡೋಲೆಗಳಲ್ಲಿ ಕಂಡುಬರುವ 'ಪ್ರೀಯು' ಪದದ ಪ್ರಯೋಗಗಳನ್ನು ಗಮನಿಸಿ.

1) ರೇಕಣ್ಣಪ್ರೀಯ್ಯನಾಗಿನಾಥ (ಚೆನ್ನಂಜೇದೇವರು ಸೇರಿಸಿದ ಮಿಶ್ರಸ್ತೋತ್ರ ಓಲೆ ೬೮. ವಚನ ೨೨)
2) ಬಸವಪ್ರೀಯ್ಯ ಕೂಡಲಸಂಗಮದೇವ (ಅದೇ: ಓಲೆ ೬೧ ವ ೯೫)
3) ಬಸವಪ್ರೀಯ್ಯ ಕೂಡಲ ಚೆನ್ನಕೂಡಲ ಸಂಗಮದೇವ (ಅದೇ ಓಲೆ ೧೨ ವ ೩೩)
4) ಉರಿಲಿಂಗಪೆದ್ದಿಪ್ರೀಯ್ಯ ವಿಶ್ವೇಶ್ವರ (ಏಕೋತ್ತರ ಶತಸ್ಥಲ ಓಲೆ ೬ ೭೧)
5) ಗೋಗೇಶ್ವರಲಿಂಗದಲ್ಲಿ ಪ್ರಭುವೆ ಸಾಕ್ಷಿಯಾಗಿ ಬಸವಪ್ರೀಯ್ಯ ಕೂಡಲ ಸಂಗಮದೇವ (ಚೆ.ದೇ. ಮಿ.ಸ್ತೋ. ಓಲೆ ೯೯. ವ ೨೮)
6) ನಂದಿಪ್ರೀಯ್ಯ ರುದ್ರನಾಗಿ (ಅದೇ ಓಲೆ ೭೭ ವ ೨೮)
7) ಬಸವಣ್ಣಪ್ರೀಯು ಚೆನ್ನಸಂಗಯ್ಯ (ಅದೇ ಓ ೯೯. ವ ೧೯)

ಕ್ರಮವಾಗಿ ಬಹುರೂಪಿ ಚೌಡಯ್ಯ, ಹಡಪದಪ್ಪಣ್ಣ, ಸಂಗಮೇಶ್ವರದಲಪ್ಪಣ್ಣ, ಉರಿಲಿಂಗಪೆದ್ದಿ, ಅಪರಿಚಿತ ವಚನಕಾರ, ಚೆನ್ನಬಸವಣ್ಣ ಮತ್ತು ಅಕ್ಕನಾಗಮ್ಮ-

ಇವರ ವಚನಭಾಗಗಳಿಂದ ಉದ್ಧೃತ ಅಂಕಿತ ಹಾಗೂ ವಿಶೇಷಣಗಳಿವೆ. ಪ್ರಿಯ, 'ಪ್ರೀಯ-ಇವು ಸಮಾನಾರ್ಥಕ ಪದಗಳು. ಪ್ರೀಯಕ್ಕೂ ಪ್ರೀಯ್ಯಕ್ಕೂ ಅರ್ಥ ಭೇದವಿದೆಯೆಂಬುದರ ಸೂಚನೆ ಪ್ರಿಯ ಎಂದಿರಬೇಕಾದ ಕಡೆ ಪ್ರೀಯ್ಯ ಎಂಬ ಪದವನ್ನು ಬರೆದು ಬಳಿಕ ಯಕಾರದ ಒತ್ತನ್ನು ವಿಲೋಪಗೊಳಿಸಿರುವುದರಿಂದ ಕಂಡು ಬರುತ್ತದೆ. ಗೋಪ್ರೀತ ಇಲ್ಲವೆ ಗೋಪ್ರೀಯ್ಯನು ಎತ್ತನೇರಿದಾತನೆಂಬುದನ್ನು ಹರಿಹರನು ಗೋಗ್ಗೇಶ್ವರ, ಗಿರಿಜೇಶನೆಂಬ ಪದಗಳಿಂದಲೇ ಕಾಣಿಸಿದ್ದಾನೆ. ಈ ಶಿವನ ಕಲ್ಪನೆ ದೇವಾಲಯಗಳ ಶಿಲ್ಪ ಹಾಗೂ ಶಿವಭಕ್ತರ ಮನೆಗಳ ಚಿತ್ರಗಳಲ್ಲಿ ಕಲಾಕೃತಿಯಾಗಿ ಅಲಂಕರಿಸಿರುವುದನ್ನು ಕಾಣಬಹುದು. ಮೇಲಣ ಪ್ರಯೋಗಗಳಲ್ಲಿ ವೃಷಭಾಂಕಿತ ಶಿವನನ್ನೇ ಕುರಿತ ಕ್ರಿಯಾವಿಶೇಷಣವಾಗಿ ಬಳಕೆಯಾದ ಪದ 'ಪ್ರೀಯ್ಯ'ವೆಂದು ತಿಳಿದು ಬರುತ್ತದೆ.

"ಪ್ರಭುದೇವರು ಬಸವಣ್ಣನೆಂಬ ಗೋಹೇಶ್ವರಲಿಂಗವ ಪಿಡಿದು ಜ್ಯೋತಿರ್ಮಯನಾದ" (ಮಿ. ಸ್ತೋ. ಓ. ೯೫). ಈ ವಚನದಲ್ಲಿ ಪ್ರಭುದೇವರು ಅನಿಮಿಷನಿಂದ ಪಡೆದ ಇಷ್ಟಲಿಂಗ ಬಸವಣ್ಣ ಅರ್ಥಾತ್ ವೃಷಭನಾಮ ಶಿವಲಿಂಗವೆಂಬುದು ವಿದಿತ. ಬಸವಣ್ಣನೆ ಗುರುವೆಂದು ಅನಿಮಿಷನರಿದ" ಎಂಬ ಹಡಪದಪ್ಪಣ್ಣಗಳ ನಿರೂಪಣೆಯೂ ಗುರುಪರಂಪರಾಂಗತ ಇಷ್ಟಲಿಂಗದ ಬಗೆಗಿನ ಸಿಂಗಿರಾಜಕೃತ ಅಮಲಬಸವರಾಜ ಚಾರಿತ್ರದಲ್ಲಿ ಚಿತ್ರಿತವಾಗಿರುವ ಕೈಲಾಸದ ಅನಿಮಿಷ-ವೃಷಭರ ಕಥಾವೃತ್ತಾಂತವನ್ನು ನೆನವುಮಾಡಿಕೊಡುತ್ತದೆ. 'ಕವಿ ಕಮಲನಾಭಕವಿಯ ಮನ್ವಂತರದ ಗೌತಮನು ಸಿಂಗಿರಾಜಾಂಕನು' ಎಂದುಕೊಂಡಿರುವುದನ್ನು ನೋಡಿದರೆ ಆತನು 'ವಿರೂಪಾಕ್ಷಶತಕ'ದ ಕರ್ತೃವಾದ 'ಕವಿಕಮಲನಾಭ' (ಓಲೆಯ 'ಪೊಗಳುವಾತನು ಕಮಲನಾಭನು' ಎಂಬ ಪಾಠಾಂತರದ ಲೇಖಾಧಾರ)ನನ್ನು ಸ್ಮರಿಸಿದ್ದಾನೆಂದು ತೋರುತ್ತದೆ. ಇಬ್ಬರೂ 15ನೆಯ ಶತಮಾನದ ಉತ್ತರಾರ್ಧಕ್ಕೆ ಸೇರಿದ ಕವಿಗಳು. ವೃಷಭನು ಅನಿಮಿಷನಿಗೆ ಕರುಣಿಸಿ ತನ್ನ ಪ್ರಾಣಜ್ಯೋತಿಃಸ್ವರೂಪದ ಲಿಂಗವನ್ನು ಕೊಟ್ಟದ್ದರಿಂದ ಬಸವಣ್ಣನೇ ಗುರುವೆಂದರಿದನೆಂಬುದನ್ನು ಹಡಪದಪ್ಪಣ್ಣನೇ ಸಾರಿದ್ದಾನೆ.

ಅಲ್ಲಮಪ್ರಭು ತನ್ನ ಗುರುಪರಂಪರೆಯನ್ನು ನಿರೂಪಿಸುತ್ತ "ಬಸವನೆಂಬ ಗಣನಾಥನ ಶಿಷ್ಯನಾದ ಅನಿಮಿಷನೆಂಬ ಗಣನಾಥನ ಶಿಷ್ಯ ತಾನೆಂದಿರುವುದರಿಂದ ಆ ಬಸವಗಣನಾಥ –ಅನಿಮಿಷರ ಸಂಬಂಧ ಗುರು ಶಿಷ್ಯ ಸಂಬಂಧವೆಂಬುದು ಸುಸ್ಪಷ್ಟ. ಹಾಗೆಯೇ ವೃಷಭಾಂಕ ಶಿವಾಲಯದ ಆ ಅಖಂಡಪರಿಪೂರ್ಣ ಗೋಳಕಾಕಾರ ತೇಜೋ ಮೂರ್ತಿಯಾದ ಮಹಾಲಿಂಗವೇ ಸಿದ್ಧಶಿವಯೋಗಿ ಅನಿಮಿಷನ ಕೈಯಶಿವಲಿಂಗವಾಗಿದ್ದು ಅಲ್ಲಮನನ್ನು ಮೆಚ್ಚಿ ಜ್ಯೋತಿರ್ಮಯನನ್ನಾಗಿ ಮಾಡಿದ ಲಿಂಗ; ಗೋಗೇಶ್ವರ ಲಿಂಗ: ದ್ವಿತೀಯ ಶಂಭುವೆನಿಸಿ ವೃಷಭನಾಮನಾದ ಶಿವ ಎಂಬುದರ ಅರಿವನ್ನು ಹರಿಹರನ ರಗಳೆ ನಮಗೆ ಮನದಟ್ಟುಮಾಡಿಕೊಡುತ್ತದೆ. ಮುಂದಿನ ವಚನವನ್ನು ಗಮನಿಸಿ.

"ಪುಣ್ಯವುಳ್ಳ ಕಾಲಕ್ಕೆ ಮಣ್ಣು ಹೊನ್ನಹುದು. ಪುಣ್ಯವುಳ್ಳ ಕಾಲಕ್ಕೆ ಪಾಷಾಣ ಪರುಷವಹುದು ನೋಡಯ್ಯ. ಮುನ್ನ ಮುನ್ನವೇ ಅಚಿನ್ತ್ಯಿತದ ಭಾಗ್ಯವೆನ್ನ ಕಣ್ಣ ಮುಂದೆ ಕಾಣಬಂದಿತು ನೋಡಾ. ಮಣ್ಣ ಮಱೆಯ ದೇಗುಲದೊಳಗೊಂದು ಮಾಣಿಕ್ಯವ ಕಂಡ ಬಳಿಕ ಇನ್ನು ಮುನ್ನಿನಂತಪ್ಪುದೆ ಗೋಗೇಶ್ವರ"

ಪ್ರಭುದೇವರ ಈ ವಚನ ಅವರ ಪೂರ್ವಭವದ ಸ್ಥೂಲಕಾಯ, ಶೂನ್ಯಕಾಯ, ಅನಿಮಿಷನೆಂಬ ಲಿಂಗದೃಢಚಿತ್ತವನ್ನು ಮನಗಾಣಿಸುತ್ತದೆ. "ಗೋಗೇಶ್ವರ ಲಿಂಗದಲ್ಲಿ ತನ್ನ ಮಱೆದ ಅಲ್ಲಯ್ಯ" (ಹ. ಶೂ. ೧೧೭) ಎಂದಿರುವ ಪ್ರಭುದೇವರೆ "ಗೋಗೇಶ್ವರನೆಂಬ ನಾಮ ಶಬ್ದಕ್ಕೆ (ಪಾಠಾಂ: ಶಬ್ದಬ್ರಹ್ಮಕ್ಕೆ) ಮುದ್ರಿಕೆಯಾಯಿತ್ತು. "ಹ.ಶೂ.ಓಲೆ: ೩೭ ವ.೧೮೩) ಎಂದಿರುವುದರಿಂದ ಪ್ರಭುವಿನ ಇಷ್ಟಲಿಂಗ ಪೂರ್ವಭವದ ಮುನ್ನಿನ ಗೋಪ್ರೀತನಾದ ಶಿವಲಿಂಗವೆ ಎಂಬುದು ಸುಸ್ಪಷ್ಟ. ಆ ಲಿಂಗವಾದರೋ ಮೇರು ಮಂದಿರದ ಮಾಣಿಕ್ಯ ಮಣಿದೀಪ್ತಿಯಾಗಿ ಕಂಡ ಲಿಂಗವೇ ಹೊರತು ಗವಿಲಿಂಗವಾಗಿಯಲ್ಲ. ಇದು ವಚನದಲ್ಲಿಯೇ ತೋರಿಬಂದ ಲಿಂಗದ ಕಾಣ್ಕೆ. "ಗೋಗೇಶ್ವರನೆಂಬೆತ್ತು ನಿಮ್ಮೊಳಗೈದಾನೆ ಅಱಿಸಿಕೊಳ್ಳಿರೋ" ಎಂದು ಎಚ್ಚರಿಸಿರುವ ಪ್ರಭುವಾಣಿಯ ಉದ್ಘೋಷ ನಮ್ಮೆಲ್ಲರನ್ನೂ "ಉತ್ತಿಷ್ಠಿತ, ಜಾಗ್ರತ ಪ್ರಾಪ್ಯವರಾನ್ನಿಬೋಧತ" ಎಂಬ ಮಹಾಮಂತ್ರದ ಪ್ರಕಟನೆಯೇ ಆಗಿದೆ.

ಇನ್ನು ಕಲ್ಯಾಣದ ಭಕ್ತಿ ಭಂಡಾರಿ ಬಸವಣ್ಣನವರೇ ಆಡಿರುವ ನುಡಿಪರುಷವಿದು.

"ಕೂಡಲಸಂಗನ ಮಹಾಮನೆಯೊಳು ಧರ್ಮ [ವೃಷಭ] ಸಂತಾನ ಭಂಡಾರಿ ಬಸವಣ್ಣನು;" ಬ.ಷ.ವ.೩೪೬.

"ಅಯ್ಯಾ, ನಿಮ್ಮ ಮುಟ್ಟದ ಗುಣದಿಂದಲಾನು ಸಂಗನ ಬಸವಣ್ಣನಾಗಿ ಗೋಗೇಶ್ವರನ ಶರಣ ಬಸವಣ್ಣಪ್ರಭುವಿನ ಮಹಾಬಸಿರೊಳಗೆ ಕಂದನಾಗಿರ್ದೆ ಕಾಣಾ ಕೂಡಲಸಂಗಮದೇವಾ" (ಹ.ಶೂ. ೧೦೫೭);

"ಅಯ್ಯಾ ಅಱನೆಯ ಭವಾಂತರದಲ್ಲಿವೃಷಭನೆಂಬ ಗಣೇಶ್ವರನೆಂದು ಹೆಸರಿಟ್ಟು ನಿಮಗೆ ವಾಹನವ ಮಾಡಿ ಎನ್ನನಿರಿಸಿಕೊಂಡಿದ್ದಿರಿ; ಏಳನೆಯ ಭವಾಂತರದಲ್ಲಿ ಬಸವನೆಂಬ ಗಣೇಶ್ವರನೆಂದು ಹೆಸರಿಟ್ಟು ನಿಮ್ಮ ಒಕ್ಕು ಮಿಕ್ಕುದಕ್ಕೆ ಎನ್ನ ಯೋಗ್ಯನ ಮಾಡಿ ಎನ್ನನಿರಿಸಿಕೊಂಡಿದ್ದ[ೀ]ರಿ ; ಇದು ಕಾರಣ ಮಹಾದಾನಿ ಕೂಡಲ ಸಂಗಮದೇವ ನೀವು ಕರುಣಿಸಿದ ಭವಾಂತರದಲ್ಲಿ ನಾನು ಬರುತಿರ್ದೆನಯ್ಯಾ". ಸಿಂಗಿರಾಜ ಪುರಾಣ ಪು.16.

ಇದು ಜನಮನೋರಂಜನೆಯ ಪುರಾಣದ ಬಣ್ಣಕದ ಮಾತಲ್ಲ ; ಹಳ್ಳಿಗರ ಮೂಢ ಕಲ್ಪನೆಯೂ ಅಲ್ಲ. ಕಾರಣ ಈ ವಚನಭಾಗ ಎಳ್ಳಷ್ಟೂ ಅರ್ಥದಲ್ಲಿ ಮಾರ್ಪಡದೆ "ಬಸವಣ್ಣನವರ ಷಟ್ಸ್ಥಲದ ವಚನಗಳು" ಎಂಬ ಮೂಲಗ್ರಂಥದಲ್ಲಿಯೇ ಅಡಕಗೊಂಡಿರುವುದು ನೋಡಿ :

"ಆಱನೆಯ ಭವಾಂತರದಲ್ಲಿ ವೃಷಭನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮಗೇಱಲು ವಾಹನವಾಗಿರಿಸಿಕೊಂಡಿರ್ದಿರಯ್ಯಾ, ಏಳನೆಯ ಭವಾಂತರದಲ್ಲಿ ಬಸವನೆಂಬ

ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮೊಳ್ಳಿದ ಮಿಕ್ಕುದಕ್ಕೆ ಯೋಗ್ಯನಾಗಲೆಂದಿರಿಸಿ ಕೊಂಡಿರ್ದಿರಯ್ಯಾ

ಮತ್ತೊಂದೆಡೆಯಲ್ಲಿ

"....ಅಯ್ಯಾ, ನೀನು ಆಕಾರವಾಗಿರ್ದಲ್ಲಿ ನಾನು ವೃಷಭನೆಂಬ ವಾಹನವಾಗಿರ್ದೆ ಕಾಣಾ." ಎಂಬೀ ವಚನಭಾಗಗಳಲ್ಲಿ ಬಸವಣ್ಣನವರು ತಮ್ಮ ಪೂರ್ವಭವದ ಧ್ಯಾನಗೋಚರ ದೀರ್ಘಾಂತರಂಗದ ದೇವ ಭಕ್ತನೆಂಬ ಕ್ರಿಯಾಂಗದ ಅವಿನಾಸಂಬಂಧವನ್ನೇ ಮನಗಾಣಿ ಸಿದ್ದಾರೆ.

"ಶಿವನಿಪ್ಪ ನೆಲೆಯನಾರೂ ಅಱಿಯರಯ್ಯ, ಎಲೆ ಗೋಹೇಶ್ವರ ನಿಮ್ಮ ಪೂರ್ವಾಚಾರಿ ಸಂಗನ ಬಸವಣ್ಣನೊಬ್ಬನೇ ಬಲ್ಲನು"

ಎಂಬೀ ಮಾತಿನಲ್ಲಿ ವೀರಶೈವಶಾಸ್ತ್ರೋಪದೇಶಕನಾದ ವೃಷಭಾವತಾರ ಶಿವನಿಗೂ ಬಸವಣ್ಣನವರಿಗೂ ಅಭೇದವನ್ನು ಪ್ರತಿಪಾದಿಸಿರುವುದು ಸ್ಪಷ್ಟವಿದೆ.

ಬಂದ ಮಾಡಹೋಗಿ ಮತ್ತೊಂದಾಯಿತ್ತೆಂಬ ಮಾತು
ದಿಟವಾಯಿತ್ತು ನೋಡಯ್ಯಾ
ನಿನ್ನ ಒಡತನ ಅನುಭವದಿಂದ
ಗುರುಮುಖ ಸಾಧ್ಯವಾದುದಯ್ಯ,
ಗೋಗೇಶ್ವರಲಿಂಗದಲ್ಲಿ
ನಿನಗೂ ಎನಗೂ ಉಪದೇಶವೊಂದಾದ ಭೇದವ
ಹೇಳಾ, ಚನ್ನಬಸವಣ್ಣ ಎಂದು ಪ್ರಭುದೇವರು ಕೇಳಲು

"ಅನಿಮಿಷಪ್ರಭುವಿಂಗೆ ಬಸವಣ್ಣ (ವೃಷಭನಾಮ ಶಿವ) ಗುರುವಾದ ಕಾರಣ, ನಾನು ನಿನಗೆ ಚಿಕ್ಕತಮ್ಮ ಕೇಳಾ, ಪ್ರಭುವೆ." "ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ. ಆ ಲಿಂಗ ನಿನಗೆ ಸಾರಿತ್ತಾಗಿ ಬಸವಣ್ಣನ ಸಂಪ್ರದಾಯದ ಕಂದನು ನೋಡಾ, ನೀನು"

ಎಂದು ಪ್ರಭುವನ್ನು ಕುರಿತು ಚನ್ನಬಸವಣ್ಣನವರು ಹೇಳಿರುವ ಮಾತು ಮನನೀಯ.

ಈ ಎಲ್ಲ ವಚನಗಳಲ್ಲಿ ಪ್ರಭುದೇವ ಬಸವಣ್ಣರಾದಿಯಾಗಿ ಹಲವು ವಚನಕಾರರು ಗೋಗೇಶ್ವರ ಅಂಕಿತಕ್ಕಿರುವ ಅರ್ಥವನ್ನೇ ಪ್ರಕಟಿಸಿದ್ದಾರೆ. ಮಹಾಲಿಂಗದೇವರ ಸಮಕಾಲೀನನಾದ ಮಗ್ಗೆಯ ಮಾಯಿದೇವ ಪ್ರಭುಗಳು ಅಲ್ಲಮಪ್ರಭುದೇವರ ವಚನಗಳನ್ನು ಸಂಗ್ರಹಿಸಿ ವ್ಯಾಖ್ಯಾನಿಸುವಾಗ ಎಲ್ಲಿಯೂ ಮೂಲವಚನಗಳಲ್ಲಿರುವ ಗೋಗೇಶ್ವರ, ಗೋಹೇಶ್ವರಾದಿಯಾಗಿ ಈ ಯಾವ ಅಂಕಿತವನ್ನೂ ಹೆಸರಿಸಿಲ್ಲ. ಅಲ್ಲಮನ ಅಂಕಿತದ ಬದಲು ಗಿರಿಜೇಶ, ಶಿವ, ಶಂಕರ, ಶಂಭು, ಸದಾಶಿವಲಿಂಗಮೂರ್ತಿ, ಪರಂ, ಲಿಂಗಂ, ದೇವ, ಪರಂಜ್ಯೋತಿ, ಪರಾನಂದಲಿಂಗಂ, ಪರಂವ್ಯೋಮ ಇತ್ಯಾದಿ ಪರಶಿವನ ಗುಣವಿಶೇಷಣಗಳಿಂದ ಕೂಡಿದ ನಾನಾಮಾಲೆಯನ್ನೇ ಬಳಸಿದ್ದಾನೆ. ಆದರೆ ಅತನೇ ಪ್ರಭುದೇವರ ವಚನಗಳನ್ನು ಪ್ರಭುಗೀತೆಯೆಂದು ಸಂಪಾದಿಸಿ ಸಂಗ್ರಹಿಸುವಾಗ ಮೂಲದಲ್ಲಿದ್ದಂತೆ ಆ ಎಲ್ಲ ವಚನಗಳಲ್ಲಿಯೂ 'ಗೋಗೇಶ್ವರ' ಎಂಬ ಅಂಕಿತವನ್ನೇ ಅಂಗೀಕರಿಸಿದ್ದಾನೆ.

ಶೂನ್ಯಸಂಪಾದನಕಾರನಾದ ಹಲಗೆಯಾರ್ಯನಂತೂ ಗ್ರಂಥಾದ್ಯಂತ ಪ್ರಭುದೇವರ ವಚನಗಳಲ್ಲಿ 'ಗೋಗೇಶ್ವರ' ಎಂಬ ಅಂಕಿತವನ್ನೇ ದೀರ್ಘಸ್ವರಸೂಚಕ ರೇಖಾಕೃತಿಯ ರಚನೆಸಹಿತ ಬಳಸಿರುವುದು ಗಮನಾರ್ಹ.

ಕಾಮಲತೆಯನ್ನು ಕಳೆದುಕೊಂಡು ಬಳ್ಳಿಗಾವೆಯ ಪುರದ ಹೊರಗಣ ತೋಟದಲ್ಲಿ ಚಿಂತಾಕ್ರಾಂತನಾಗಿ ತಲೆಬಾಗಿ ಕಣ್ಣೀರ್ಕರೆಯುತ್ತ ನೆಲವನ್ನು ಬರೆಯತೊಡಗಿದಾಗ ಆ ಹೆಜ್ಜೆಯಲ್ಲಿ ಹೊನ್ನಕಳಶ ಥಳಥಳಿಸಿ ಹೊಳೆಯುತ್ತ ಕಾಣಿಸಿಕೊಂಡಿತಷ್ಟೆ. ಆ ಕಳಸದ ಕೆಳಗೆ ಕಂಡುಬಂದದ್ದಾದರೂ ಏನೆಂಬುದನ್ನು ಈ ತನಕ ಯಾರೂ ವಿವೇಚಿಸಿದುದು ಪ್ರಸ್ತುತ ಲೇಖಕನ ಗಮನಕ್ಕೆ ಬಂದಿಲ್ಲ. ಅದೇ "ಸೂತ್ರಿಕ ಸಿಂಹಮಂಟಪದ ವಲಯ". ಇದರ ಪ್ರಸ್ತಾಪ ಮಾಡಿರುವವನು ಕವಿ ಹರೀಶ್ವರ, ಅದೂ ತನ್ನ ಇದೇ ರಗಳೆಯಲ್ಲಿ. ಆ ಕಳಶಕ್ಕೆ ಆಧಾರವಾಗಿ ಅದನ್ನು ಹೊತ್ತಿದ್ದ ಸಿಂಹದಿಂದ ಕೂಡಿದ ಮಂಟಪದ ಬದಿಯಲ್ಲಿದ್ದ ದೇಗುಲವೇ 'ವೃಷಭಾಂಕಿತ ಶಿವಾಲಯ'ವೆಂಬುದನ್ನು ಕಂಡಿದ್ದೇವೆ. ಈ ಹಿಂದೆ ಶಿವನಿಂದ ವೀರಶೈವೋಪದೇಶವನ್ನು ಮೊದಲು ಪಡೆದವನು ನಂದಿ ಎಂಬುದರ ಪ್ರಸ್ತಾಪ ಮಾಡಲಾಗಿದೆ. ಆ ಶಾಸ್ತ್ರಶಿಕ್ಷಕರಾದ ಗುರುಗಳ ಸಿಂಹಮಂಟಪ ಇಲ್ಲವೆ ಶಿವಸಿಂಹಪೀಠಾಲಂಕೃತ ಅನುಭವಮಂಟಪವೇ ಇದು. ಸಿಂಹವಾಹನನೆಂಬ ವಿಶೇಷಣ ಶಿವನಿಗುಂಟೆಂಬುದು ತಿಳಿದುಬಂದದ್ದೆ. ಸೂತ್ರಿಕ ಅರ್ಥಾತ್ ಸೂತ್ರಧಾರನೆಂಬರ್ಥದಲ್ಲಿ ಬಸವಪುರಾಣದ ವಿವರವಿದು:

''ಕಪಟ ನಾಟಕ
ಸೂತ್ರದಿಂ ವಿಕೃತಿ ಪ್ರಕೃತಿ ಚಾ
ರಿತ್ರಗತಿಗಳನಾಡಿಸುವ ತತ್ಸೂತ್ರಿಕನು'' — ಸಂಧಿ ೨೦, ಪದ್ಯ ೩೧,

''ಓ ತತ್ತ್ವಾತ್ ಸರ್ವಜೀವೇಷು ಸೂತ್ರಂ ಪ್ರಾಣ ಇತೀರಿತಃ'' ''ಸ್ಯೂತಂ ಜಗದಿದಂ ಯಸ್ಮಿನ್ ಸೂತ್ರಂ ವಾಯುರಸೌ ಸ್ಮೃತಃ'' ''ಓಂ ಜಯಪರಮೇಶ್ವರ ಪರಮಾತ್ಮ ಈಶ್ವರ ನರ್ವಿ ಪರ್ವಿ ಅಡಗಿಕೊಂಡಿರ್ದ ಓರ್ಬಣ್ಣಗೆ,"— "ನಾದಂ ಮೂಜು ಲೋಕದೊಳೆಸೆವುದಾ ಪಿಂಡಾಂಡದೊಳ್ತುಂಬಿ"—

ಹೀಗೆ ಸರ್ವಾಂತರ್ಯಾಮಿಯಾಗಿ ಸೂತ್ರಿಕನೆನಿಸಿದವನು ಶಿವನೆಂಬ ಭಾವ. ಪ್ರಭುಲಿಂಗಲೀಲೆಯಲ್ಲಿ ಆತನನ್ನೇ "ಜಗದ ಜಂತ್ರದ ಸೂತ್ರಧಾರಿ." ಎಂದು ಕರೆಯಲಾಗಿದೆ. ಬಸವಪುರಾಣದಲ್ಲಿ ಶಿವನನ್ನು The unseen mover of world's lifestyle'' ಎಂಬ ಭಾವವಿದ್ದರೆ, ಪ್ರಭುಲಿಂಗಲೀಲೆಯಲ್ಲಿ "The unseen mover of world's machine'' ಎಂಬ ವಿಚಾರಸರಣಿಯಿದೆ.

ಹರಿಹರನು ಸೂತ್ರಿಕ ಸಿಂಹಮಂಟಪದ ವಲಯದ ನಿರೂಪಣೆಯಿಂದ ಪ್ರಾಚೀನ ಕಾಲದಿಂದಲೂ ಶಿವಾಲಯಗಳು ಒಂದೊಂದು ಮಠಕ್ಕೆಸೇರಿದುವಾಗಿ ಅವುಗಳ ನಿರ್ವಹಣೆಯನ್ನು ಆಯಾ ಮಠಾಧಿಪತಿಗಳೇ ಹೊತ್ತಿದ್ದಂತೆ ಕಂಡುಬರುತ್ತದೆ. ಹರಿಹರನು

ಅದರ ನೆನಪನ್ನು ಈ ವೃಷಭಾಂಕಿತ ಶಿವಾಲಯದ ಬಳಿಯಲ್ಲಿಯೇ ಇದ್ದ ಗುರುಮಠದ ಪ್ರಸ್ತಾಪದಿಂದ ಮಾಡಿಕೊಟ್ಟಿದ್ದಾನೆ. ಚಾಮರಾಜನಗರದ ಶಾಸನ 116 ಕ್ರಿ. ಶ. 1317. ಎಪಿಗ್ರಾಫಿಕ ಕರ್ನಾಟಕ ಮತ್ತು ಮೈಸೂರು ಗೆಜೆಟೀರ್ ಸಂಪುಟ 2 ನೋಡಿ. ಬಳ್ಳಿಗಾವೆಯ ತೋಂಟದ ಗುರುಪರಂಪರೆ ಆ ಅನಂತರವೂ ಮುಂದುವರಿದುದರ ಗುರುತಾಗಿ ತಾಮ್ರಶಾಸನದಲ್ಲಿ ಹರದನಹಳ್ಳಿ ಗೋಸಲಸಿದ್ಧೇಶ್ವರರ ಮಠಕ್ಕೆ ನಂದೀಶ್ವರ ಶಿವಾಲಯವಲ್ಲದೆ ಐಂಚೈದು ದೇವಾಲಯಗಳ ಮೇಲುವಿಚಾರವೂ ಸೇರಿತ್ತೆಂಬುದು ಮಠ ಹಾಗೂ ದೇವಾಲಯಗಳ ಸಂಬಂಧವನ್ನು ಸೂಚಿಸುತ್ತದೆ. ಈ ದೃಷ್ಟಿಯಿಂದ ಹರಿಹರನ ಸೂತ್ರಿಕಸಿಂಹಮಂಟಪ ಹಾಗೂ ವೃಷಭಾಂಕಿತ ಶಿವಾಲಯಗಳ ನಿರೂಪಣೆ ಐತಿಹಾಸಿಕ ಪ್ರಾಮುಖ್ಯವನ್ನು ಪಡೆದಿದೆ.

ಹರಿಹರನ ಸಿಂಹಮಂಟಪದ ಮೇಲಣ ಹೊನ್ನ ಕಳಶದ ನಿರೂಪಣೆಗೆ ಆಧಾರವಾದ ವಚನಭಾಗವನ್ನು ನೋಡಿ

"ಅಷ್ಟದಳ ಕಮಲದ ಹೂಗಲ್ಲವಿಡಿದು ಶೂನ್ಯಸಿಂಹಾಸನಕ್ಕೆ ಧವಳಾಲಯವೆತ್ತಿತ್ತು.... ಮೇಲುಪ್ಪರಿಗೆಯ ಮಾಡಿ ಚಂದ್ರಸೂರ್ಯರೆಂಬ ದೀಪಂಗಳಂ ಬೆಳಗಿ, ಶಿವೋಹಮೆಂಬ ಶಿಖರಿಯ ಮೇಲೆ ಮಹಾಜ್ಞಾನಪ್ರಕಾಶವೆಂಬ ಹೊನ್ನ ಕಳಶವ ಸಿಂಗಾರವಮಾಡಿ ನಿಶ್ಶೂನ್ಯ ನಿರಾಳವೆಂಬ ಶೂನ್ಯಸಿಂಹಾಸನವ ಮಾಡಿದ ಬಸವಪ್ರಿಯಯ್ಯ ಕೂಡಲ ಚೆನ್ನಸಂಗಯ್ಯನಲ್ಲಿ ಎನ್ನ ಗುರು ಸಂಗನ ಬಸವಣ್ಣ."

ಸಂಗಮೇಶ್ವರದಲಪ್ಪಣ್ಣನ ವಚನದ ಈ ಸಿಂಹಪೀಠ ಜ್ಞಾನಾಂಬರ ಶೂನ್ಯಪೀಠಸ್ಥಾನವೇ ಆಗಿದೆ. ಇಲ್ಲಿನ ಹೊನ್ನಕಳಶದ ಮಾತು ಹರಿಹರನ ರಗಳೆಯಲ್ಲಿದ್ದು ಧ್ವನಿಪೂರ್ಣ ವಾಗಿದೆ.

ಪ್ರಭುದೇವರ ರಗಳೆಯ ಪಾತ್ರ ಐತಿಹಾಸಿಕ ಹಾಗೂ ಸಾಹಿತ್ಯ ಸಂಸ್ಕೃತಿಗಳ ಸಂಶೋಧನೆಯ ದೃಷ್ಟಿಯಿಂದ ಎಷ್ಟು ಮಹತ್ವಪೂರ್ಣವೆಂಬುದನ್ನು ಮನಗಂಡದ್ದಾಗಿದೆ. ಪ್ರಭುದೇವರ ವಚನಾಂಕಿತದ ಸ್ವರೂಪವನ್ನು ಮುಂದೆ ಸಂಗ್ರಹಿಸಬಹುದು.

ಪರಮಾತ್ಮನನ್ನು 'ಓಂ ಲೋಕಗೂಢಾಯ ನಮಃ' ಎಂಬ ಮಂತ್ರೋಚ್ಚರಣೆಯಿಂದ ಆತನ ಸಹಸ್ರನಾಮಗಳಲ್ಲೊಂದನ್ನು ಜಪಿಸುವುದುಂಟು. ಆ ಪರಮಾತ್ಮನ ಆಳವಾದ ಅನುಭವದ ಅಭಿವ್ಯಕ್ತಿಯಾಗಿ ಆ ಮಂತ್ರವಿದೆ. ಸ್ವಾನುಭಾವಪೂರ್ಣ ವಚನಗಳು ವಚನಕಾರರ ಆತ್ಮಾಂತರಂಗದ ಧ್ಯಾನಗೋಚರ ಪರಾನಂದಾನುಭವದ ಸ್ಫುರಣೆಯಿಂದ ಹೊರಹೊಮ್ಮಿದ ಪ್ರಾಣಜ್ಯೋತಿಯ ಅಂಕುರಗಳು. ಈ ಮಾತು ಆ ಅನುಭವದ ಎತ್ತರಕ್ಕೆ ಏರಿದವರ ವಚನಗಳಿಗೆ ಅನ್ವಯಿಸುವಂಥದು. ಪ್ರಭುದೇವರಂತಹ ಮಹಾನುಭಾವರ ಅನುಭವದ ಮಾತು ಬೆಡಗಿನ ಭಾಷೆಯಲ್ಲಿಯೇ ಗೂಢವಾಗಿರುವುದನ್ನು ಕಾಣಬಹುದು. "ಕೂಟದೊಳೆ ಕಣ್ಣೆ ತಸುವಾದ ಬೆಡಗಿನ ಯೋಗಿ"-ನೋಡಿ: ಇದೇ ರಗಳೆ. (ಇಲ್ಲ

'ತನು' ಎಂಬ ಮಾತು ಗೂಢಾರ್ಥದ್ಯೋತಕ ಪದ) ಮಸುಮುಸಿ ಗುಮ್ಮಟಯ್ಯಗಳ ವಚನದಲ್ಲಿಯೂ ಈ ತೆರನಾದ ನಿರೂಪಣೆಯಿರುವುದನ್ನು ಕಾಣಬಹುದು.

ಭಗವಂತನು ತನ್ನ ಮನಸ್ಸಿನಲ್ಲಿ ಮೂಡಿಸುವ ಭಾವನೆಗಳಲ್ಲಿ ಮಾತ್ರ ಭಕ್ತನಾದವನು ಆಸಕ್ತನಾಗಿರುತ್ತಾನೆ. ಅದನ್ನೇ ಭಗವದನುಭವವೆನ್ನುವುದು. ಶರಣಸತಿ ಲಿಂಗಪತಿ ಭಾವದಿಂದ ಜೀವ ಪರಮರ ಸಾಮರಸ್ಯವನ್ನು ಶರಣುವೆಣ್ಣಾಗಿ ಸಾಧಿಸಹೊರಟ ಘನಲಿಂಗದೇವರ ಹೆಸರು ಲೋಕಪ್ರಸಿದ್ಧ. ಆ ಸತಿಪತಿಭಾವ, ಅದರ ಮಧುರ ಸಮ್ಮಿಳನ 'ಒಂದು' ಅರ್ಥಾತ್ ಮಹಾಶೂನ್ಯಬ್ರಹ್ಮವು ದಿವ್ಯಾನಂದಲೀಲಾಭಾವದಿಂದ ಎರಡಾದದ್ದು ಮತ್ತೆ ಎರಡೊಂದುಗೂಡಿ 'ಒಂದೇ' ಆಗಬಯಸುವ ಜೀವನ ಪರಿಪೂರ್ಣ ತತ್ತ್ವದ ಸಂಕೇತವದು. ನಮ್ಮೊಳಗೇ ಇರುವ ತೊಲಗದಲುಗದ ಗಂಡುಹೆಣ್ತನಗಳ ಅಸದೃಶಸಂಬಂಧಾನುಭವದ ನಗ್ನಸತ್ಯ ಸಹ. ನಮ್ಮೊಳಗೆ ರೊಚ್ಚಿಗೆಬ್ಬಿಸುವ ಬುದ್ಧಿ ಭಾವಗಳ ನಡುವಣ ಒಳತೋಟಿ ಇಲ್ಲವೆ ತುಮುಲವೂ ಹೌದು. ಮೇಲಣ ಬೆಡಗಿನ ಯೋಗಿಯ ಹರಿಹರನ ವರ್ಣನೆಯಲ್ಲಿ ಸತಿಪತಿಗಳ ಸಮುಕಳೆಯ ಸಂಯೋಗದ ಸಾಮರಸ್ಯಾನುಭವದ ತಾಂತ್ರಿಕ ಚಿಂತನೆಯನ್ನು ಕಾಣಬಹುದು. ವಾಕ್ ಮತ್ತು ಅರ್ಥಗಳ ಅವಿನಾಸಂಬಂಧದಂತೆ ಶಿವಶಕ್ತಿಸಂಬಂಧ. ಶರಣಸತಿ ಲಿಂಗಪತಿಭಾವವೂ ಈ ಬಗೆಯದೇ. ಆ ಕಾರಣ ಈ ಸಂಬಂಧಸೂಚಕ ಸಂಕೇತಗಳನ್ನು ಕೇವಲ ಸಾಂಕೇತಿಕಾರ್ಥದಲ್ಲಿ ಪರಿಗಣಿಸಬೇಕಲ್ಲದೆ ಅನ್ಯಥಾದೃಷ್ಟಿಯಿಂದಲ್ಲ ಎಂಬುದನ್ನು ಮನಗಂಡಾಗ ಆ ಬಗೆಗೆ ತಿರಸ್ಕಾರಭಾವನೆಯಿಂದ ಕಾಣುವುದು ಸರಿಯೇ ? ಸೂಳೆ ಸಂಕವ್ವೆ ತನ್ನ ಇಷ್ಟಲಿಂಗವನ್ನು ನಿರ್ಲಜ್ಜೇಶ್ವರನೆಂದು ಕರೆದುದಕ್ಕೆ, ಆಕೆಯ ಪರಮಾತ್ಮಾನುಭವಕ್ಕೆ ಕೀಳುಭಾವದ ಕಳಂಕವುಂಟೆ?

ಪ್ರಭುದೇವರ ಅಂಕಿತದ ಸಂಬಂಧವಾಗಿ ನಾವು ಗಮನಿಸಬಹುದಾದ ಮುಖ್ಯಾಂಶವೊಂದುಂಟು. ವೀರಶೈವ ಸಿದ್ಧಾಂತರಹಸ್ಯೋಪದೇಶಕರಾದ ಹುಲಿಗೆರೆ ಮಹಾಲಿಂಗದೇವರ ನಿರೂಪಣೆಯಂತೆ ಅಧಿಕೃತವಾಗಿ ರಚಿಸಲ್ಪಟ್ಟು ಸಂರಕ್ಷಿತವಾಗಿರುವ ಪ್ರಭುದೇವರ ಟೀಕಿನ ವಚನಗಳ ತಾಡೋಲೆಗಳೆಲ್ಲವನ್ನೂ ಕಣ್ಣಾರೆ ಕಂಡು ಅಲ್ಲಿನ ಹಾಗೂ ಬೇರೆ ಪ್ರತಿಗಳಲ್ಲಿ ಕಂಡುಬಂದ ಅಲ್ಲಮನ ಎಲ್ಲ ಅಂಕಿತಗಳನ್ನು ಪರಿಶೀಲಿಸಿ ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶವಿಚಕ್ಷಣ ರಾವ್‌ಬಹದ್ದೂರ್ ದಿ. ರಾ. ನರಸಿಂಹಚಾರ್ಯರು ಉದ್ಧರಿಸಿರುವ ಅಲ್ಲಮನ ವಚನಗಳಲ್ಲಿ (ನೋಡಿ: ಕ. ಕ. ಚ. ಪುಟ 149 ಪ್ರಥಮ ಸಂಪುಟ 1907) 'ಗೋಹೇಶ್ವರ' ಪಾಠವಿದೆಯೇ ಹೊರತು 'ಗುಹೇಶ್ವರ' ಎಂಬುದಲ್ಲ. ಶಾಸನಲಿಪಿತಜ್ಞರ ಮಾತಿರಲಿ, ನಾವೇ ಕಣ್ಣು ಬಿಟ್ಟು ಲಿಪಿಕರ ಲೇಖನವಿಧಾನವನ್ನರಿತು ಗಮನಿಸಿದಲ್ಲಿ ಗುರುತಿಸಬಹುದಾದ ಪಾಠವದು. ಆ ಕಾರಣ ಏಕಾರ್ಥಪರ್ಯಾಯ ಪದಗಳಾದ ಗೋಗೇಶ್ವರ ಅಥವಾ ಗೋಹೇಶ್ವರ ಈ

ಎರಡೂ, ಅಂಕಿತದ ಮೂಲಾರ್ಥದಲ್ಲಿ ಬಳಕೆಯಾಗಿದ್ದ, ಮುಂದೆಯೂ ಬಳಸಬೇಕಾದ ಶಬ್ದರೂಪಗಳು.

ಕಿವಿಗೆ ಕೇಳಿಬರಬೇಕಾದ ಲಿಪಿರೇಖಾಕೃತಿಸೂಚಿತ ಧ್ವನಿಯ ಮೂಲಲಿಖಿತ ಪಾಠ ವಿದ್ದು ಅದರ ಯಥಾರ್ಥವಾದ ಶಾಬ್ದಿಕ ಇಲ್ಲವೆ ಶ್ರುತಿಯ ಪಾಠಕ್ಕೆ ಎಡೆಗೊಡದ "ಕಪಟ ಕಂನಡ/ಕಣ್ಣಡ" ಅರ್ಥಾತ್ ಕಣ್ಮಾಯೆಯ 'ಮಱಿಗನ್ನಡ'ವೆನಿಸಿದ ಪರಿಣಾಮವಾಗಿ ನಿಜಪಾಠದ ಸ್ಥಾನದಲ್ಲಿ ನಟಿಯ ಇಲ್ಲವೆ ಹುಸಿಪಾಠ ಪ್ರತಿಷ್ಠಿತವಾಗಿ ಬೇರೂರಿಕೊಂಡಿರುವುದಕ್ಕೆ ಪ್ರಭುದೇವರ ವಚನಾಂಕಿತದ ಬಹುರೂಪಪಾಠಕ್ಕಿಂತ ಅಪ ಪಾಠ (ಗುಹೇಶ್ವರ/ಗೊಹೇಶ್ವರ)ದ ಪ್ರಚಾರದ ಪ್ರಸಿದ್ಧಿಯೇ ಸಾಕ್ಷಿ. 'ಗುಹೇಶ್ವರ' ಎಂಬ ಪಾಠವೇ ಬೇರೆ ಎಲ್ಲ ಪಾಠಗಳಿಗೂ ಮೂಲ ಎಂದು ಸಾಧಿಸುವುದಂತೂ ಸಾಧು ವಲ್ಲ. ಪದಗಳು ತಮ್ಮ ದೀರ್ಘರೂಪವನ್ನು ಕಾಲ ಉರುಳಿದಂತೆ ಜನರ ಬಾಯಲ್ಲಿ ಅದರ ಅರ್ಥ ಕೆಡದಿದ್ದಲ್ಲಿ ಹ್ರಸ್ವವಾಗುವುದುಂಟು. ಬಾಹುದು > ಬಹುದು ; ತಂದಾನ್ > ತಂದನ್, ತಂದನು. ಏಕ > ಎಕ್ಕ ; ಗೋನ್ದೆ > ಗೊನ್ದೆ ಆದಂತೆ. ಉಡಲ್ > ಒಡಲ್ ಆಗಬಹುದು ; ಆದರೆ ದೇಹ ಎಂಬರ್ಥದಲ್ಲಿ ಓಡಲ್ ಆಗುವ ಬಗೆ ಹೇಗೆ? ಗುಹೆ ಅದರ ಅರ್ಥದಲ್ಲಿ ಗೊಹೆ ಆಗಬಹುದು ; ಆದರೆ ಗೋಹೆ ಆಗುವುದೆಂತು ? ಆ ಕಾರಣ ಪ್ರಭುದೇವರ ಅಂಕಿತದ ವಿಶ್ಲೇಷಣೆಯನ್ನು ಹೀಗೆ ಕಾಣಿಸಬಹುದು.

ಆ ಮುನ್ನ ಈಗಾಗಲೇ ಪ್ರಕಟಿತವಾಗಿರುವ ಗೂಳೂರು ಸಿದ್ಧವೀರಣಾಚಾರ್ಯರ ಶೂನ್ಯಸಂಪಾದನೆ, ಫ. ಗು. ಹಳಕಟ್ಟಿ (ಸಂ) ಬಿಜಾಪುರ 1930ರಲ್ಲಿ ಇರುವ ಅಂಕಿತ 'ಗುಹೇಶ್ವರ' ; 'ಸಾಹಿತ್ಯ ಸಮಿತಿ, ಧಾರವಾಡದ ಪ್ರಕಟನೆ ೧೯೫೬ ಪ್ರಭುಲಿಂಗಲೀಲೆ ಗ್ರಂಥದಲ್ಲಿ 'ಗುಹೇಶ್ವರ' 'ಗುಹೇಶ್ವರಲಿಂಗ' ಎಂಬ ಅಂಕಿತವು ಅಚ್ಚಾಗಿದೆ. ಆದರೆ ಪದ್ಯ ಹಾಗೂ ವಚನಗಳಲ್ಲಿನ ಅಂಕಿತವು "ಗೊ ಹೆ ಶ್ವ ರ" ಎಂದೇ ಲಿಖಿತವಾಗಿರುವು ದನ್ನು ಪ್ರಭವ ಸಂವತ್ಸರದ ಕ್ರಿ.ಶ. 1748ರ ಸ್ವಂತ ಸಂಶೋಧನ ಕೋಟೆಯ ಓಲೆ ಪ್ರತಿಯಲ್ಲಿ ಕಾಣಬಹುದು. ಶಿವಗಣಪ್ರಸಾದಿ ಮಹಾದೇವಯ್ಯನವರ ಪ್ರಭುದೇವರ ಶೂನ್ಯಸಂಪಾದನೆ ಸಂಪುಟ ೧ ಶ್ರೀಬೃಹನ್ಮಠ ಸಂಸ್ಥಾನ, ಚಿತ್ರದುರ್ಗದ ಪ್ರಕಟನೆಯ (1969) ಗ್ರಂಥಭಾಗದಲ್ಲಿ 'ಗೊಗೇಶ್ವರ' ಎಂದೂ ಅನುಬಂಧ ೧ರಲ್ಲಿ 'ಗೊಗೇಶ್ವರಲಿಂಗ' ಎಂದೂ ಅನುಬಂಧ ೨ರಲ್ಲಿ 'ಗೋಹೇಶ್ವರ' (ಪುಟ 273) ಎಂದೂ ಅದೇ 274ರಲ್ಲಿ 'ಗೊಹೇಶ್ವರಲಿಂಗ' ಎಂದೂ ಅನುಬಂಧ ಮೂರರಲ್ಲಿ 'ಗೊಗೇಶ್ವರಲಿಂಗ' (ಪುಟ 283) ಎಂದೂ ಅದೇ ಮಿಕ್ಕೆಡೆ 'ಗೊಹೇಶ್ವರ' ಹಾಗೂ 'ಗೋಹೇಶ್ವರ' ಎಂದೂ ಅಲ್ಲಮನ ವಚನಾಂಕಿತವನ್ನು ಕಾಣಿಸಿ ಅಂಕಿತದ ಮೂಲ ಇಲ್ಲವೆ ಸದೃಶ ಪಾಠದ ಜೊತೆಗೆ ಗೊಂದಲಮಯವಾದ ಇತರ ಶಬ್ದರೂಪಗಳನ್ನು ಕೊಟ್ಟು ನಿಶ್ಚಿತ ನಿಲವನ್ನು ತಾಳದಿರು ವುದು ಸ್ಪಷ್ಟವಿದೆ. ಕರ್ನಾಟಕ ವಿಶ್ವವಿದ್ಯಾಲಯದ ೧೯೭೭ರ ಶಿವಗಣ ಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆ ಹಾಗೂ 'ವೀರಶೈವ ಚಿಂತಾಮಣಿ'ಗಳಲ್ಲಿ

ಬರುವ ಪ್ರಭುದೇವರ ವಚನಾಂಕಿತವನ್ನು 'ಗುಹೇಶ್ವರ' ಎಂದೇ ಭಾವಿಸಿಕೊಂಡು ಬಳಸಲಾಗಿದೆ. ಆದರೆ ಉದಾಹರಣೆಗೆ ಕ್ರಿ. ಶ. 1759ರಲ್ಲಿ ಪ್ರತಿಗೊಂಡಿರುವ ಸ್ವಂತ ಸಂಶೋಧನ ಕೋಟೆಯ ವೀರಶೈವ ಚಿಂತಾಮಣಿಯ ಓಲೆಯಲ್ಲಿ "ಗೊ ಹೆ ಶ್ವ ರ" ಅರ್ಥಾತ್ = 'ಗೋಹೇಶ್ವರ' ಅಂಕಿತವೇ ಇರುವುದನ್ನು ಕಾಣಬಹುದು. ಎರಡು ಹಸ್ತಪ್ರತಿಗಳ ಸಹಾಯದಿಂದ ಸಂಪಾದಿತವಾಗಿರುವ ಈ ಗ್ರಂಥಕ್ಕೆ ಪಾಠಾಂತರಗಳಿಲ್ಲದೆ ಇಲ್ಲ. ಆದರಲ್ಲಿಯೂ ಪ್ರಭುದೇವರ ವಚನಾಂಕಿತದಂತಹ ಪ್ರಮುಖ ಶಬ್ದಕ್ಕೆ ಮೂಲ ದಲ್ಲಿರುವ ಪಾಠವನ್ನು ಖಚಿತಗೊಳಿಸದಿರುವುದರಿಂದ ಗ್ರಂಥಸಂಪಾದನೆಯ ಪ್ರಕ್ರಿಯೆ ಸಾಂಗವಾಗದ ಲೋಪಕ್ಕೆ ಗುರಿಯಾಗಿದೆ.

"ಕೆಲವು ಪ್ರಾಚೀನ ಓಲೆಗರಿ ಪ್ರತಿಗಳಲ್ಲಿ ಗೊಹೇಶ್ವರ, ಗೋಗೇಶ್ವರ ಎಂಬ ಪ್ರಭು ದೇವರ ಮುದ್ರಿಕೆಯನ್ನು ನೋಡಬಹುದಾಗಿದೆ" ಎಂದು ತಿಳಿಸುತ್ತ "ಜೋಗೇಶ್ವರ–ಗೋಗೇಶ್ವರ ಪದಗಳು 'ಯೋಗೇಶ್ವರ'ದ ರೂಪಾಂತರಗಳು" (ವೀರಶೈವ ಸಂ 2 ಪುಟ 15, 'ಗೋರಖನಾಥ' ಲೇಖಕರು ಶ್ರೀ ಜಿ. ಎಂ. ಉಮಾಪತಿಶಾಸ್ತ್ರಿ) ಎಂಬ ಹೇಳಿಕೆ ಯುಂಟು. ಅಧಿಕೃತ 'ಬಱವಳ'ರಿಂದ ಲಿಖಿತವಾಗಿರುವ ಪ್ರಾಚೀನ ತಾಡಪ್ರತಿಗಳಲ್ಲಿ ಸುಸ್ಪಷ್ಟವಾಗಿ 'ಗೊ' ಮತ್ತು ಹೇ ಅಕ್ಷರಗಳ ನಡುವೆ ದೀರ್ಘ ಸ್ವರ ಸೂಚಿಯಾಗಿ ಎಡೆ ಬಿಟ್ಟು ಅಲೇಖಭಾಗವಿರುವ ಬಗೆಗೆ ಈ ಹಿಂದೆಯೇ ವಿವೇಚಿಸಲಾಗಿದೆಯೆಷ್ಟೆ. 'ಯೋಗೇ(ಗೀ)ಶ್ವರ'ಪದ 'ಜೋಗೇ(ಗೀ)ಶ್ವರ' ಎಂದೂ 'ಯೋಗಿ'ಪದ–'ಜೋಗಿ' ಎಂದೂ ರೂಪಾಂತರ ಗೊಳ್ಳುವುದುಂಟು. ಆದರೆ 'ಯೋಗೇಶ್ವರ' 'ಗೋಗೇಶ್ವರ'ವಾಗಿ ರೂಪಾಂತರಗೊಳ್ಳುವ ಸಾಧ್ಯತೆ ಹೇಗೆ? 'ಯೋಗಿಗಳಿಗೆ' ಗೊಗ್ಗಯ್ಯ ಎನ್ನುವ ವಾಡಿಕೆ ಯಿದೆ ಎನ್ನುವ ಲೇಖಕರ ಮಾತಿಗೆ ಯಾವ ಪ್ರಮಾಣವೂ ಇಲ್ಲ. ಈ ಅನಿಸಿಕೆಗೆ ಪ್ರಭುದೇವರ ವಚನಗಳಲ್ಲಿ ಎಲ್ಲಿಯೂ ಅವಕಾಶವಿಲ್ಲ. ಪ್ರಭುದೇವರೆ "ಅಱಿವಿನ ಕುಱುಹಿದೇನೊ ? ಒಳಗೆ ಅನಿಮಿಷನಂದಿನಾಥನಿರಲು ಪೂಜಿಸುವ ಭಕ್ತನಾರೋ ? ಪೂಜೆಗೊಂಬ ದೇವನಾರೊ? (ವ. 300) ಎಂಬಲ್ಲಿ ಗೋಗೇಶ್ವರನನ್ನು ಅನಿಮಿಷ ನಂದಿ ನಾಥನೆಂದಿರುವುದು ಸುವಿದಿತ. ಆ ಕಾರಣ ಲೇಖಕರ ಮೇಲಣ ಹೇಳಿಕೆಯನ್ನು ಕೇವಲ ಒಂದು ಊಹೆಯೆಂದು ಪರಿಗಣಿಸುವುದೇ ಸೂಕ್ತ.

ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ: ಸಂಪುಟ–೨ ಅಲ್ಲಮಪ್ರಭುದೇವರ ವಚನ ಸಂಪುಟ ೧೯೯೩ರ ಅಲ್ಲಮ ಪ್ರಭುವಿನ ಷಟ್ಸ್ಥಲ ಟೀಕಿನ ೬೪ಳ ವಚನಗಳಲ್ಲಿಯೂ ಅದೇ ಗ್ರಂಥದ ಕಾಂಡ ಎರಡರ ಹೆಚ್ಚಿನ ವಚನಗಳಲ್ಲಿಯೂ ಗುಹೇಶ್ವರ, ಗುಹೇಶ್ವರ ಲಿಂಗ, ಗುಹೇಶ್ವರನ ಶರಣ, ಗೊಹೇಶ್ವರ––ಈ ಅಂಕಿತಗಳಿದ್ದು ಮೂಲದಲ್ಲಿನ ತಾಡೋಲೆಯ ವಾಸ್ತವಿಕ ಪಾಠವನ್ನು ಲಕ್ಷಿಸದೆ ತಿದ್ದುಪಡಿಮಾಡಿರುವುದು ಟೀಕಿನ ಭಾಗ ದಲ್ಲಂತೂ ಸುಸ್ಪಷ್ಟವಾಗಿದೆ. ಮೂಲದೊಡನೆ ಹೋಲಿಸಿ ನೋಡಿದ ಹೆಚ್ಚಿನ ಹಲವು

ವಚನಗಳ ಅಲ್ಲಮನ ಅಂಕಿತವನ್ನು ಮುದ್ರಿತ ಗ್ರಂಥದಲ್ಲಿ ಮಾರ್ಪಡಿಸಿರುವುದು ಕಂಡು ಬಂದಿದೆ. ಪ್ರಭುದೇವರ ವಚನಗಳ ಅಂಕಿತವೇನು ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವನ್ನೇ ಮಾಡದೆ 'ಗುಹೇಶ್ವರ' ಎಂಬ ಅನಧಿಕೃತ ಪಾಠವನ್ನೇ ಕಣ್ಣುಮುಚ್ಚಿ ಕೊಂಡು ಎರವಲು ತಂದುಕೊಂಡಿರುವುದರಿಂದ ತನ್ನನ್ನೂ ಓದುಗರನ್ನೂ ವಂಚಿಸಿ ಕೊಂಡಂತಾಗಿದೆ. ಇಂತಹ ಜನಪ್ರಿಯ ಆವೃತ್ತಿಗಳು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ಸಂಪಾದಕೀಯದ ಆದರ್ಶ ಕನ್ನಡಿಯೊಳಗಣ ಗಂಟಾಗಿದೆಯಲ್ಲದೆ ಸಫಲ ವಾಗಿ ಕರಗತವಾಗಿಲ್ಲವೆಂಬುದು ಸಖೇದಾಶ್ಚರ್ಯವನ್ನುಂಟುಮಾಡಿದೆ.

ಪ್ರಭುದೇವರ ರಗಳೆಯಿಂದ ಪ್ರಾರಂಭಿಸಿ ಈಗಾಗಲೇ ಕಾಣಿಸಿಕೊಂಡಿರುವ ಅಲ್ಲಮನ ವಚನಾಂಕಿತದ ವಿಶ್ಲೇಷಣೆಯನ್ನು ವಿವೇಚಿಸಿರುವ ಕ್ರಮವನ್ನು ಮುಂದೆ ಗುರುತಿಸ ಲಾಗಿದೆ.

ಗೋಗ್ಗೇಶ್ವರ>ಗೋಗೇಶ್ವರ> <ಗೋಹೇಶ್ವರ> <ಗೊಹೇಶ್ವರ (ಅಧಿ ಕೃತ ಲಿಪಿಕಾರರಲ್ಲದವರಿಂದ ಆದ ಹಾಗೂ ಮೂಲದಲ್ಲಿದ್ದ ಸರಿಯಾದ ಶಬ್ದರೂಪವನ್ನು ತಪ್ಪಾಗಿ ಗ್ರಹಿಸಿದವರ ಅಜಾಗರೂಕತೆಯಿಂದಾದ ಅಶುದ್ಧ ಅಚಾತುರ್ಯದ ವಾಚನ ಪಾಠ). ಗೊಹೇಶ್ವರ<ಗುಹೇಶ್ವರ<(ಗುಹಾ+ಈಶ್ವರ)(ಪ್ರಭುದೇವರೇ ಹೇಳಿರುವ ದೇಗುಲವನ್ನು ಕಾಣದೆ, ಇಲ್ಲದ ಗುಹೆಯನ್ನು ಸೃಷ್ಟಿಸಿ ಓದು ಬಾರದವರನ್ನು ರಂಜಿಸ ಹೊರಟ ಸ್ವಕಲ್ಪಿತ ಕಾಲ್ಪನಿಕಪಾಠ). ಗೋಪ/ಗೋಗ (m ವೃಷಭ, ಶಿವ)> ಗೋಪ+ಈಶ್ವರ>ಗೋಹೇಶ್ವರ ಮತ್ತು ಗೋಗೇಶ್ವರ(ಇವು ಮೂಲದರ್ಥವನ್ನು ಗರ್ಭೀಕರಿಸಿಕೊಂಡಿದ್ದು ಈವರೆಗೂ ಮತಿಯ ಮಂಥನಕ್ಕೆ ಮೀರಿ ಕೈಗೆ ಎಟುಕದೆ ಹೋಗಿದ್ದ, ತಾಡೋಲೆಯಲ್ಲಿದ್ದ ಅಂಕಿತದ ಲಿಪಿಲೇಖದ ಸ್ವರೂಪವನ್ನು ಕಾಣಿಸಿಕೊಟ್ಟು ಲಿಪಿಶಾಸ್ತ್ರಜ್ಞರು ಬಳಸಿರುವ ಶುದ್ಧ ಹಾಗೂ ಏಕಾರ್ಥಕ ದ್ವೈರೂಪ ಪಾಠ.) ಗೋಗ >ಗೋಹ+ಈಶ್ವರ>ಗೋಹೇಶ್ವರ (ಸ್ವರಮಧ್ಯದ 'ಗ'ಕಾರ ಧ್ವನಿಸಾಮ್ಯದಿಂದ ಅಭಿನ್ನಾರ್ಥ ತಾತ್ಪರ್ಯಸಹಿತ 'ಹ'ಕಾರದ ಉಚ್ಚಾರವನ್ನು ಪಡೆದಿರುವ ಪಾಠ.(ಹೋ: ಮುರುಗ>ಮುರುಹ). ಗೋ–ಗೋವಿನ, ಹ–ರೂಪ ಧರಿಸಿದವ ಗೋಹ(ಶಿವ: ದ್ವಿತೀಯ ಶಂಭುವೆನಿಸಿದ ವೃಷಭ). ಗೋಹ>ಗೋಗ. ಉದಾಹರಣೆಗೆ : ಆಹಾದು >ಅಗದು ; ಅರ್ಹ>ಅರ್ಗ>ಅರಗ (ಜೈನ); ಸಿಂಹಳ>ಸಿಂಗಳ. ಗುಹ+ ಈಶ್ವರ>ಗುಹೇಶ್ವರ m. ತಹಪ್ಪನ್‌ಸ್ವಾಮಿ ಎಂಬರ್ಥದಲ್ಲಿ ಪ್ರಭುದೇವರು ಈ ಪದ ವನ್ನು ಯಾವ ಒಂದೆಡೆಯಲ್ಲಿಯೂ ಬಳಸಿಲ್ಲವೆಂಬುದು ಸುಸ್ಪಷ್ಟ.

"ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ. ಆ ಲಿಂಗ ನಿನಗೆ ಸಾರಿತ್ತಾಗಿ ಬಸವಣ್ಣನ ಸಾಂಪ್ರದಾಯದ ಕಂದ ನೋಡಾ, ನೀನು ಎಂದುದಕ್ಕೆ ಪ್ರಭುದೇವರು "ಗೋಗೇಶ್ವರ ಲಿಂಗದಲ್ಲಿ ನಿನಗೂ ಎನಗೂ ಉಪದೇಶವೊಂದಾದ ಭೇದವ ಹೇಳಾ.

ಚೆನ್ನಬಸವಣ್ಣ ಎಂದು ಕೇಳಲು ಅವರು, ಅನಿಮಿಷ ಪ್ರಭುವಿಂಗೆ ಬಸವಣ್ಣ (ದ್ವಿತೀಯ ಶಂಭುವೆನಿಸಿದ ವೃಷಭ) ಗುರುವಾದ ಕಾರಣ ನಾನು ನಿನಗೆ ಚಿಕ್ಕ ತಮ್ಮನು ಕೇಳಾ, ಪ್ರಭುವೆ." ಹೀಗೆ ಪ್ರಭುದೇವರ ಗೋಗೇಶ್ವರ ಅರ್ಥಾತ್ ಗೋಹೇಶ್ವರ ಅಂಕಿತ ತನ್ನ ಮೂಲಾರ್ಥದಲ್ಲಿ ನಮ್ಮ ಮನ ನಾಟಿರಲೆಂದು ಆಶಿಸುವೆ.

"ಆದಿಯಲ್ಲಿ ಬಸವಣ್ಣನುತ್ಪತ್ತಿಯಾದ ಕಾರಣ ನಾಗಲೋಕದ ನಾಗಗಣಂಗಳಿಗೆಯೂ ಬಸವಣ್ಣನ ಪ್ರಸಾದ. ಮರ್ತ್ಯಲೋಕದ ಮಹಾಗಣಂಗಳಿಗೆಯೂ ಬಸವಣ್ಣನ ಪ್ರಸಾದ. ದೇವಲೋಕದ ದೇವಗಣಂಗಳಿಗೆಯೂ ಬಸವಣ್ಣನ ಪ್ರಸಾದ, ಗೋಗೇಶ್ವರಾ, ನಿಮ್ಮಾಣೆ. ಎನಗೆಯೂ ನಿನಗೆಯೂ ಬಸವಣ್ಣನ ಪ್ರಸಾದ".

ಎಂಬ ಪ್ರಭುದೇವರ ವಚನದ ಮಗ್ಗೆಯ ಮಾಯಿದೇವರ ಅನುವಾದದಿಂದ ಈ ಲೇಖನವನ್ನು ಸಮಾಪ್ತಿಗೊಳಿಸಬಹುದಾಗಿದೆ.

ಸ್ವರ್ಗೇ ಮರ್ತ್ಯೇ ಚ ಪಾತಾಲೇ ಯೇ ವಸಂತಿ ಮಹಾಗಣಾಃ
ತೇಷಾಮಪ್ಯಾವಯೋರೀಶ ಪ್ರಸಾದೋ ವೃಷಭಾತ್ಮನಃ

—ಪ್ರ. ಗೀ. ಶ್ಲೋಕ ೧೬೫

ಶಿವಂ ಭೂಯಾತ್

# ಟೀಕೆ - ಟಿಪ್ಪಣಿಗಳು

---

## ಶ್ರೀ : ನನ್ನ ಅನುಭವ

ಮೊದಲನೆಯದಾಗಿ ಅಮೋಘ ಕೃತಿಯಾದ ಅಶ್ವತ್ಥಾಮನಲ್ಲಿ ನಾನು ಮುಖ್ಯ ಪಾತ್ರವಾದ ಮೇಳನಾಯಕನಾಗಿ ನಾಲ್ಕು ಬಾರಿ ಅದನ್ನು ವಿವರಿಸುತ್ತಿದ್ದೇನೆ.

ಮೊದಲು ಅಶ್ವತ್ಥಾಮನ್ ನಾಟಕವನ್ನು ನಮ್ಮ ಕಾಲೇಜಿನ ಹೊರಾಂಗಣದಲ್ಲಿ ಗ್ರೀಕ್ ಮಾದರಿಯ ರಂಗ ಮಂಟಪದಲ್ಲಿ ಆಡಲಾಯಿತು. ಅಧ್ಯಕ್ಷತೆ ವಹಿಸಿದ್ದ ನನ್ನ ಪೂಜ್ಯ ಗುರುಗಳು ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದಾಗ ನನ್ನ ಸಂತೋಷಕ್ಕೆ ಪಾರವಿರಲಿಲ್ಲ!

ಎರಡನೆಯ ಬಾರಿಗೆ ನಾವು ಈ ನಾಟಕವನ್ನು ನಮ್ಮ ಕಾಲೇಜಿನ ರಂಗಮಂಟಪ ದಲ್ಲಿ ಆಡಿದಾಗಲೂ ಯಶಸ್ವಿಯಾಯಿತು !

ಮೂರನೇ ಬಾರಿಗೆ, ಅಶ್ವತ್ಥಾಮನ್ ನಾಟಕವನ್ನು ಅರಸು ಬೋರ್ಡಿಂಗ್ ಹೋಂ ನಲ್ಲಿ ಆಡಿದಾಗ, ಆಗಿನ ಚೀಫ್‌ಕೋರ್ಟಿನ ಮುಖ್ಯನ್ಯಾಯಾಧೀಶರಾದ ಶ್ರೀ ಶಂಕರ ನಾರಾಯಣರಾಯರು ಮುಖ್ಯ ಅತಿಥಿಯಾಗಿ ಉಪಸ್ಥಿತರಿದ್ದರು.

ನಾಟಕವು ಮುಂದುವರೆದಂತೆ, ಯುದ್ಧದ ಭೀಕರ ಪರಿಣಾಮವನ್ನು ವರ್ಣಿಸುವ ಹಾಗೂ ಈ ಹಾಳು ಯುದ್ಧ ಎಂದಿಗೆ ಕೊನೆಗೊಂಡು ಆಪ್ಯಾಯಮಾನವಾದ ಶಾಂತಿ ಯಾವಾಗ ಲಭಿಸುತ್ತೋ ಎಂದು ಹಂಬಲಿಸುವ ಭಾಗವನ್ನು ನಾನು ಈಗ ಉದಾಹರಿ ಸಲು ತಮ್ಮ ಕ್ಷಮೆ ಬೇಡುತ್ತೇನೆ. ಅದು ಹೀಗೆ—

ಪೊತ್ತಿದುವೆ, ಪೊತ್ತಿದುವೆ, ನಿಷ್ಠುರದ ನುಡಿಗಳ್ ।
ಮೊತ್ತ ಮೊದಲ್ ಇನಿಯುವೆ, ತುದಿನಂಜುನುಡಿಗಳ್।
ಒಂದುನುಡಿ-ಒಂದುಕಿಡಿ, ಕೊನೆಗೆ ಕಾಳ್ಗಿಚ್ಚು।
ಬೀರರ್ ಇರ್ವರ್ ಕೀಡೆ, ಬಿದಿರ ಮೇಳ್ ಗಿರ್ಚು।
ಮಾಡಿದವ ನಾರ್ ಮೊದಲ್ ಯುದ್ಧವನ್-ಕಾಣೆನ್ ।
ಕೂಡಿರ್ಪರೊಳ್ ಕಲಹವೊಡ್ಡಿದವನ್ ಕಾಣೆನ್ ।
ಬೇರೆ ಕಾರ್ಯಂತಗದೆ ಸಾಹಸಿಗನಾಳ್ಗೆ ॥

ಬೇರೆ ಭೂಷಣ ವಿರದೆ ಮಾನವನ ತೋಳ್ಗೆ ।
ಓ, ಪೊಲ್ಲಯುದ್ಧಮೇ ಎಂದು ನಿಲ್ವಯ್।
ಓ ತಾಯೆ ಶಾಂತಿಯೇ ಎಂದು ಗೆಲ್ವಯ್।"

ಈ ಭಾಗವನ್ನು ನಾನು ಭಾವನಾತ್ಮಕವಾಗಿ ಭಾವಪರವಶನಾಗಿ ಹಾಡಿದಾಗ, ಮುಖ್ಯ ಅತಿಥಿಗಳಾಗಿದ್ದ ಶಂಕರನಾರಾಯಣ ರಾಯರು "Once more" ಎಂದಾಗ ನನ್ನ ಆನಂದವನ್ನು ತಾವೇ ಊಹಿಸಬಹುದು. ನಾಟಕ ಮುಗಿದ ನಂತರ ನನ್ನ ಪೂಜ್ಯ ಗುರುಗಳು ನನ್ನನ್ನು ಪ್ರಶಂಶಿಸಿದಾಗ ನನ್ನ ಸಂತೋಷಕ್ಕೆ ಪಾರವೇ ಇಲ್ಲದಾಯ್ತು.

ನಾಲ್ಕನೇ ಬಾರಿಗೆ, ಬೆಂಗಳೂರ್ ಸೆಂಟ್ರಲ್ ಕಾಲೇಜ್ ಆಹ್ವಾನದ ಮೇಲೆ ಹೋಗಿ ಕೀ|| ನಾಟಕ ಶಿರೋಮಣಿ ವರದಾಚಾರ್ಯರು ಆಡುತ್ತಿದ್ದ, ತುಳಸೀ ತೋಟದ ರಂಗಮಂಟಪದಲ್ಲಿ ಆಡಿದಾಗಲೂ ಶ್ರೋತೃಗಳ ವೀಕ್ಷಕರ ಮೆಚ್ಚಿಗೆಗೆ ಪಾತ್ರವಾಗಿ ಸಂತಸ ತಂದಿತು. ಇನ್ನು ನಾನು, ನನ್ನ ಗುರುಗಳು ರನ್ನನ ಗದಾಯುದ್ಧದ ಭಾಗವನ್ನು ನಾಟಕಕ್ಕೆ ಅಳವಡಿಸಿದಾಗ, ಅದರಲ್ಲಿ ನಾನು ದುರ್ಯೋಧನ ಪಾತ್ರವನ್ನು ವಹಿಸಿ ಅವನ ಹೃದಯ ವಿದ್ರಾವಕ ಪ್ರಲಾಪವನ್ನು ಎಂದಿನಂತೆಯೇ ಪರವಶನಾಗಿ ಹಾಡಿದಾಗ ಸಭಿಕರ ಮೆಚ್ಚಿಗೆಗೆ ಪಾತ್ರವಾದುದಲ್ಲದೆ, ಆ ಮನ ಕರಗುವ ಸನ್ನಿವೇಶಕ್ಕೆ ಕೆಲವರ ಕಣ್ಣು ತೇವವಾದದ್ದು ಕಂಡಿದ್ದೇನೆ. ಅವನ ಪಾಡನ್ನು ಕಂಡು.

ಇಲ್ಲಿ, ನನಗೆ ಅತಿಯಾಗಿ ಪರಿಣಾಮ ಮಾಡಿದ ದುರಂತದಲ್ಲಿ ಕೊನೆಗೊಂಡ "ದುಃಖ ಸೇತು" ಕವನವನ್ನು ಮೈಮರೆತು ಹಾಡಿದಾಗ ಸಭಿಕರ ಪ್ರತಿಕ್ರಿಯೆ ಸಹಜವಾಗಿ ಶೋಕ ರಸ ಎದ್ದು ಕಾಣುತ್ತಿದ್ದು ಕೆಲವರು ತಮ್ಮ ಕೈ ಚೌಕವನ್ನು ಕಣ್ಣಿಗೆ ಒತ್ತುತ್ತಿದ್ದುದನ್ನೂ ಗಮನಿಸಿದ್ದೇನೆ ಇದು ದುಃಖ ಪ್ರಸಂಗವಾದರೆ, ಆನಂದ ಬೀರುವ "ರಜತ ಮಹೋತ್ಸವ ಪ್ರಗಾಥ"ವನ್ನು ನಮ್ಮ ನಾಲ್ವಡಿ ಕೃಷ್ಣರಾಜ ಒಡೆಯರ ಇಪ್ಪತ್ತೈದನೇ ಆಳ್ವಿಕೆ ಬೆಳ್ಳಿ ಮಹೋತ್ಸವದ ಸಂದರ್ಭದಲ್ಲಿ ನಮ್ಮ ಕಾಲೇಜಿನ 'Cricket pavilian'ದಲ್ಲಿ ಏರ್ಪಡಿಸಿದಾಗ, ವೈಸ್ ಛಾನ್ಸಲರ್ ಬ್ರಜೇಂದ್ರ ನಾಥ ಶೀಲರು ಮುಖ್ಯಅತಿಥಿಯಾಗಿಯೂ, ಕೀ|| ರೋಲೋರವರು ಅಧ್ಯಕ್ಷರಾಗಿದ್ದಾಗ, ನಮ್ಮ ಕೃಷ್ಣರಾಜ ಒಡೆಯರವರು ತಮ್ಮ ಪ್ರಸಿದ್ಧಿ ಹರಿಕಾರರನ್ನು ಕಳುಹಿಸಿಕೊಟ್ಟಾಗ ನಾನು ಹಾಡಿದಾಗ ಎಲ್ಲರ ಮೆಚ್ಚಿಗೆ ಪಡೆದು, ಮುಖ್ಯವಾಗಿ ರೋಲೋರವರು "Silver tongued Ramayyer" (ಆಗಿನ ಕಂಠ ಈಗೆಲ್ಲಿ ?) ಎಂದು ಕೊಂಡಾಡಿದ ನೆನಪು ನನಗೆ ಈಗಲೂ ಅಚ್ಚಳಿಯದೆ ಉಳಿದಿದೆ. ಈ ಕಾರ್ಯಕ್ರಮಗಳಿಂದ ನನ್ನ ಗುರು ಕಾಣಿಕೆ ಸಲ್ಲಿಸಿದ ತೃಪ್ತಿ ನನಗಿದೆ.

ಇನ್ನೊಂದು ವಿಶೇಷ ಸಂಗತಿ ಎಂದರೆ ನಾನು ನನ್ನ ಪ್ರೀತಿಯ ಮಹಾರಾಜಾ ಕಾಲೇಜಿನ ವರ್ಷಗಳ ವ್ಯಾಸಂಗದಲ್ಲಿ ನಾನು ಕರ್ನಾಟಕ ಸಂಘದಲ್ಲಿ ಸಕ್ರಿಯ ಪಾತ್ರ

ವಹಿಸುತ್ತಿದ್ದು, ಪ್ರಾರಂಭದ ಪ್ರಾರ್ಥನಾ ಕಾರ್ಯ ಕೀ|| ಡಿ. ವಿ. ಜಿ. ರವರ ಪ್ರಖ್ಯಾತ ಗೀತೆ "ವನಸುಮ" ನನ್ನ ಅಚ್ಚುಮೆಚ್ಚಿನ ಪ್ರಾರ್ಥನಾ ಕ್ರಮವಾಗಿತ್ತು.

ಅಂದ ಹಾಗೆ, ನಾನು ಮೈಸೂರಿನಿಂದ ಬೆಂಗಳೂರಿಗೆ ಹೋದಾಗಲೆಲ್ಲಾ ಕೀ || D. V. G. ರವರ ಆಶೀರ್ವಾದವನ್ನು ಪಡೆಯದೆ ಹಿಂದಿರುಗುತ್ತಿರಲಿಲ್ಲ. ಒಂದು ಬಾರಿ' ಅವರನ್ನು ಸಂದರ್ಶಿಸಿದಾಗ "ರಾಮಣ್ಣ, ನೀವು ನಮ್ಮ ಗೋಖಲೇ ಇನ್ಸ್‌ಟ-ಟ್ಯೂಟ್‌ನಲ್ಲಿ ನಿಮಗೆ ಕೋರಿದ ಭಾಗಗಳಲ್ಲಿ ಒಂದು ಕಾರ್ಯಕ್ರಮ ನಡೆಸಿಕೊಡಬೇಕೆಂದಾಗ ಒಪ್ಪಿ, ಕಾರ್ಯಕ್ರಮ ನಡೆಸಿದ್ದು ಅವರಿಗೆ ತೃಪ್ತಿ ಸಂತೋಷ ತಂದಿತ್ತು.

ಇನ್ನೊಂದು ವಿಶೇಷ ಸಂತಸದ ಸುದ್ದಿ ಎಂದರೆ ನಾನು, "ಲಾ" ಪರೀಕ್ಷೆಗೆ ಮದ್ರಾಸಿಗೆ ಹೋಗಬೇಕಾಗಿ (ಆಗ ಮೈಸೂರಿನಲ್ಲಿ 'ಲಾ' ಕಾಲೇಜು ಇರಲಿಲ್ಲ) ಅಲ್ಲಿ ನಾನು ನನ್ನ ಸಹಪಾಠಿ ಶ್ರೀ ಡಿ. ರಾಮಯ್ಯನವರೂ ಸೇರಿ ಕರ್ನಾಟಕ ಭ್ರಾತೃ ಸಂಘ" ಒಂದನ್ನು ಸ್ಥಾಪಿಸಿ 2 ವರ್ಷ ಸತತವಾಗಿ ಪ್ರತಿತಿಂಗಳೂ ಕನ್ನಡ ಕಾರ್ಯಕ್ರಮವನ್ನು ನೆರವೇರಿಸಿದ್ದು, ಅತಿಶಯ ಹಾಗೂ, ಅಪೂರ್ವ ವಿಜಯದ ಸಂಗತಿ (ಆಗ ಪ್ರಾಂತ್ಯ ಮರು ವಿಂಗಡನಾ ಕ್ರಮವಿರಲಿಲ್ಲವಾಗಿ) ಇದು ಸಾಧ್ಯವಾಯ್ತು.

ಆಗ ಅಲ್ಲಿ ಪ್ರಸಿದ್ಧ ಡಾ|| ಡಿ. ರಾಮರಾಯರನ್ನು ಅಧ್ಯಕ್ಷರನ್ನಾಗಿ, ದೇವಾಶಿಖಾಮಣಿ ಶ್ರೀ ಅಳಸಿಂಗ್ರಾಚಾರ್ಯರನ್ನು ಉಪಾಧ್ಯಕ್ಷರಾಗಿ, ಹಾಗೂ ಅಲ್ಲಿಯ ಕ್ರಿಶ್ಚಿಯನ್ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಶ್ರೀ ನರಸಿಂಹರಾಯರವರನ್ನು ಗೌರವ ಕಾರ್ಯದರ್ಶಿಯಾಗಿಯೂ, ನಾನು ಸಂಚಾಲಕನಾಗಿ ಕಾರ್ಯನೆರವೇರಿಸಲು ಅಲ್ಲಿಯ ಕ್ರಿಶ್ಚಿಯನ್ ಕಾಲೇಜು, ಪ್ರೆಸಿಡೆನ್ಸಿ ಕಾಲೇಜು, ಲಯೋಲಾ ಕಾಲೇಜು, ವೆಟರಿನರಿ ಕಾಲೇಜಿನ ಕನ್ನಡ ಪ್ರೇಮಿಗಳನ್ನು ಕೂಡಿಹಾಕಿ ಯಶಸ್ವಿಯಾಗಿ ನಿರ್ವಹಿಸಿದೆವು.

2 ವರ್ಷದ ಕೊನೆಯಲ್ಲಿ ಒಂದು ಭಾರಿ ಸಮಾರಂಭವನ್ನು ಏರ್ಪಡಿಸಿ ನಮ್ಮ ನೂರಾರು ಕನ್ನಡ ಅಭಿಮಾನಿಗಳ Photo" ಹಾಗೂ ಉಪಹಾರದಿಂದ ಸಂತೋಷ ಕೂಟ ಮುಕ್ತಾಯವಾಯಿತು.

ನನಗೆ ಅತ್ಯಂತ ಪ್ರಿಯವಾದ ಈ Photo" ಹಾಗೂ ನಮ್ಮ ಮಹಾರಾಜಾ ಕಾಲೇಜಿನ 1928ರ ಕರ್ನಾಟಕ ವಾರ್ಷಿಕೋತ್ಸವ ಸಂಘದ Photo" ಸಹಾ ಸಂಗ್ರಹಿಸಿ ಅದು ನನ್ನ ಅಮೂಲ್ಯ ಸಂಗ್ರಹವಾಗಿ ಪ್ರತಿದಿನ ಅದರ ದರ್ಶನ ಪಡೆಯುತ್ತಿದ್ದೇನೆ. ಉದಾಹರಣೆಗೆ, ಕರ್ನಾಟಕ ಸಂಘದ Photo" ನಲ್ಲಿ ನನ್ನ ಪೂಜ್ಯಗುರುವರ್ಯರುಗಳಾದ ಬಿ. ಎಂ. ಶ್ರೀ ಮತ್ತು N. S. ಸುಬ್ಬರಾಯರವರಲ್ಲದೆ ಕನ್ನಡದಲ್ಲಿ ಗಣ್ಯವಾಗಿ ದುಡಿದ ಅನೇಕ ದಿಗ್ಗಜಗಳು ಕಾಣಿಸಿಕೊಳ್ಳುತ್ತಾರೆ|

ಉದಾಹರಣೆಗೆ, ಕೀ|| D.V.G. ಪ್ರೊ|| ವೆಂಕಣ್ಣಯ್ಯ ಶ್ರೀವಿ.ಸೀತಾರಾಮಯ್ಯ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಇತ್ಯಾದಿ ಮಹಾಸಿದ್ಧಹಸ್ತರು ಇದ್ದಾರೆ.

ಎಚ್. ರಾಮಯ್ಯ[redacted]

# ಕ್ರಿಯಾ ಸಮಾಸ – ಪ್ರತಿಕ್ರಿಯೆ

ಕರ್ನಾಟಕಲೋಚನ ಪತ್ರಿಕೆಯ ಡಿಸೆಂಬರ್ 1993, ಜೂನ್ 1995 ಮತ್ತು ಡಿಸೆಂಬರ್ 1996 ಸಂಚಿಕೆಗಳಲ್ಲಿ ಕನ್ನಡದ ಕ್ರಿಯಾಸಮಾಸವನ್ನು ಕುರಿತು ನವೀನ ಸಮೀಕ್ಷೆಗಳು ವಿದ್ವಾಂಸರಿಂದ ನಡೆದಿವೆ. ಅವುಗಳಲ್ಲಿ 1995ರಲ್ಲಿ ಬಂದುದು ಶ್ರೀ ಸೇಡಿಯಾಪು ಕೃಷ್ಣಭಟ್ಟರ ನಿರೂಪಣೆಗಳಾಗಿದ್ದು ಕನ್ನಡ ವ್ಯಾಕರಣವನ್ನು ಸರಿಯಾಗಿ ಅರ್ಥಮಾಡಿಕೊಂಡ ಪರಿಣಾಮವಾಗಿದ್ದು ಆಕ್ಷೇಪಾರ್ಹವೆನಿಸುವ ಅಂಶವಿಲ್ಲದುದಾಗಿದೆ. ಉಳಿದವೆರಡೂ ಶ್ರೀ ಎಂ. ಜಿ. ವಾರಿ ಎಂಬ ವಿದ್ವಾಂಸರವು. ಹಲವೆಡೆ ಇವರ ಪ್ರತಿಪಾದನೆಗಳು ಅವ್ಯಾಕರಣವಾಗಿ ತೋರುವುದರಿಂದ ಈ ಪ್ರತಿಕ್ರಿಯೆಯಾಗಿರುತ್ತದೆ–

ಸಂಸ್ಕೃತದಲ್ಲಿ ಮುಖ್ಯವಾಗಿ ಆರು ಸಮಾಸಗಳನ್ನು ಹೇಳಿದ್ದರೂ ಕನ್ನಡದಲ್ಲಿ ಬರುವ ಅವ್ಯಯೀಭಾವಸಮಾಸದಲ್ಲಿ ಅಂಶಾಂಶೀಭಾವ ತೋರುವುದರಿಂದ ಅದನ್ನೇ 'ಅಂಶಿ ಸಮಾಸ' ವೆಂದು ಶಬ್ದಾನುಶಾಸನದಲ್ಲಿ ಸೂತ್ರೋದಾಹರಣಪೂರ್ವಕ ವಿವರಣೆಯನ್ನು ನೀಡಿರುವುದುಂಟು. ಹೀಗೆ ಈ ಆರಲ್ಲದೆ, ಗಮಕಸಮಾಸ ಮತ್ತು ಕ್ರಿಯಾಸಮಾಸ ಎಂಬಿವೆರಡನ್ನು ಕನ್ನಡದ ವ್ಯಾಕರಣವೈಶಿಷ್ಟ್ಯಗಳನ್ನಾಗಿ ಕೇಶಿರಾಜನು ಹೇಳಿದ್ದಾನೆ. ನಾಮಪದಗಳು ಅರ್ಥಾನುಗುಣವಾಗಿ ಸೇರುವುದು ಸಮಾಸದ ಲಕ್ಷಣ, ಪದ ಎಂದರೆ, ಪ್ರಕೃತಿಗೆ ಪ್ರತ್ಯಯ ಸೇರಿರಬೇಕು. 'ಪ್ರತ್ಯಯಾಂತಂ ಪದಂ', 'ಸುಪ್ತಿಙಂತಂ ಪದಂ', 'ನಿರುತಂ ಪ್ರಕೃತಿಪ್ರತ್ಯಯಮೆರಡುಮೊಡಂಬಟ್ಟು ತೋರೆ ಪದಮೆನೆ ಪಡೆಗುಂ'–ಎಂಬಿವು ಪದದ ಲಕ್ಷಣಸೂತ್ರಗಳು. ಆದುದರಿಂದ ಪ್ರಕೃತಿಗಳು ಸೇರಿ ಸಮಾಸವಾಗುವುದೆಂಬ ಹೇಳಿಕೆಯೇ ಅವ್ಯಾಕರಣ. ಸಮಾಸವಾದಾಗ, ಆ ಪದಗಳ ನಡುವಣ ವಿಭಕ್ತಿ ಲೋಪವಾಗುವುದು. ಸಮಾಸಲಕ್ಷಣ ಹೀಗಿದ್ದರೂ ಕನ್ನಡ ಕೈಪಿಡಿಯಲ್ಲಿ (ಪುಟ: 19) ಈ ಅಸಂದಿಗ್ಧ ನಿರೂಪಣೆಯನ್ನು ಅಡಿಟಪ್ಪಣಿಗೆ ಹಾಕಿ, ಅವ್ಯಾಕರಣವಾಗಿ ಹೀಗೆ ನಿರೂಪಿಸಲಾಗಿದೆ–"ಎರಡು ಅಥವಾ ಹೆಚ್ಚು ಪ್ರಕೃತಿಗಳು ಕೂಡಿ ಒಂದು ಶಬ್ದವಾದಾಗ ಸಮಾಸವಾಗುತ್ತದೆ." ಅಲ್ಲಿನ ಉದಾಹರಣೆಗಳಿವು:–

ನಾಮ + ನಾಮ : ಮಲ್ಲಿಗೆನನೆ, ಮಲರ್ಗಣ್. ಬಿಲ್ಜಾಣಂ, ಅರಮನೆ  
ಗುಣ + ನಾಮ : ಬೆಳ್ದಿಂಗಳ್, ತೆಳ್ಗದಂಪು, ಬಿಣ್ಪೊಜೆ  
ಧಾತು + ನಾಮ : ಆಡುಗೂಟ್, ಉಡುಗೊಜೆ  
ನಾಮ + ಧಾತು : ಕೆಳೆಗೊಳ್, ಮರೆವುಗು.  
ಗುಣ + ಧಾತು : ಉಳ್ಪುರ್, ಒಳ್ಪುಕೆಯ್  
ಧಾತು + ಧಾತು : ಎಟ್ತುರ್, ಪೋತರ್

ಈ ನಿರೂಪಣೆಯಲ್ಲಿ ಎರಡನೆಯದು ತೊರೆತು, ಉಳಿದವು ಸರಿಯಲ್ಲವೆಂಬುದನ್ನು ಮನಗಂಡಿದ್ದ ನಾನು, ನನ್ನ ಶಿಷ್ಯರಿಗೆ ವ್ಯಾಕರಣಬೋಧನೆಯ ಸಂದರ್ಭಗಳಲ್ಲೆಲ್ಲ,

ಅವು ಹೇಗೆ ಮತ್ತು ಏಕೆ ಸರಿಯಲ್ಲವೆಂಬುದನ್ನು ವಿಶದಪಡಿಸಿದ್ದೇನೆ. ನಾಮ + ನಾಮ ಎಂಬ ವರ್ಗದಲ್ಲಿರುವ 'ಮಲರ್ಗಣ್' ಹೊರತು, ಇತರವು ತತ್ಪುರುಷ ಸಮಾಸಪದಗಳು. ಮಲರ್ಗಣ್–'ಮಲರಂತಪ್ಪ ಕಣ್' ಎಂಬುದಾಗಿ ಪೂರ್ವಪದ ವಿಶೇಷಣವಾಗಿ ಕರ್ಮಧಾರಯವಾಗುವುದು- ಮಲರಿನ+ಕಣ್–ಎಂದಾಗ, ಅರ್ಥಬಾಧೆ ಬರುತ್ತದೆ. ಹೂವಿಗೆ ಕಣ್ಣಿಲ್ಲವಷ್ಟೆ? ಆದುದರಿಂದ ನಾಮ+ನಾಮ ಎಂಬ ವರ್ಗದ ತತ್ಪುರುಷ ಸಮಾಸದ ಸಾಲಿನಲ್ಲಿ ಮಲರ್ಗಣ್ ಬರಬಾರದಿತ್ತು. ಧಾತು + ನಾಮ ಉದಾಹೃತ ಸಮಾಸ ಪದಗಳಲ್ಲಿ ಅಡು, ಉಡು ಎಂದು ಮಾತ್ರ ಗಣನೀಯವಾದರೆ, ಅವು ಧಾತುಗಳೆಂಬುದು ನಿಜ. ಆದರೆ ವಿಗ್ರಹಿಸುವಾಗ ಅಡು (ಅಡುವಿಕೆಯಾಗಿರುವ ಅಂದರೆ, ಬೆಂದ) + ಕೂಳ್ ಎಂದೇ ಅರ್ಥ. ಮುಂದಿನದು ಉಡುವ+ಕೊಱೆ ಎಂಬುದಾಗಿ ಪೂರ್ವಪದ ವಿಶೇಷಣವಾಗಿರುತ್ತದೆ. ಇಂತಹ ಸಮಾಸಪದಗಳನ್ನು ಧಾತು+ನಾಮ ಎಂದು ತೋರಿಸುವುದು ಅವ್ಯಾಕರಣವಾಗುತ್ತದೆ. ಗುಣ + ಧಾತು ಎಂಬ ವರ್ಗದಲ್ಲಿ ಉಳ್ಳರ್, ಒಳ್ಪಿಕೆಯ್ ಇವೆ. ಉಳ್ಳರ್ (ಉಳ್ಳವರು) ಎಂಬುದು ಸಮಾಸಪದವೇ ಅಲ್ಲ. ಇದರಂತೆ ಹೋದವರು, ಬಂದವರು ಮುಂತಾದವು ಹೇಗೆ ಸಮಾಸಪದಗಳೆನಿಸುವವೋ: ಹಾಗೆ ಹೇಳಿದವರಿಗೇ ಗೊತ್ತು. 'ಒಳ್ಪಿಕೆಯ್' ಎಂಬುದನ್ನು 'ಒಳ್ಪಿತನ್ನು+ಕೆಯ್' ಎಂದು ವಿಂಗಡಿಸಿ ಕ್ರಿಯಾಸಮಾಸವೆನ್ನಲು ಅಡ್ಡಿಯಿಲ್ಲ. ಧಾತು + ಧಾತು ಎಂಬುದರಲ್ಲಿ ಬರುವ ಎಳ್ತರ್, ಪೋತರ್ ಎಂಬಿವೆರಡೂ ಸಂಯುಕ್ತಕ್ರಿಯೆಗಳಲ್ಲದೆ, ಸಮಾಸಪದಗಳಲ್ಲ. ಪ್ರಕೃತಿಗಳು ಸೇರಿ ಸಮಾಸವಾಗುವುದೆಂಬ ಸೂತ್ರನಿರೂಪಣೆಯೇ ಅಸಾಧು ಅಥವಾ ಅವ್ಯಾಕರಣವಾಗುತ್ತದೆ. ಆದರೆ, ಹಿಂದಿನ ವ್ಯಾಕರಣಸೂತ್ರಗಳನ್ನು ಅಲಕ್ಷಿಸಿದ ಅಂಶವನ್ನೇ ಗತಾನುಗತಿಕವಾಗಿ ಅನುಸರಿಸಿದುದರಿಂದ ಬಂದ ಗೊಂದಲಗಳು ಕರ್ನಾಟಕಲೋಚನದಲ್ಲಿ ಶ್ರೀ ವಾರಿಯವರಿಂದ ಆದಂತೆ ತೋರುತ್ತಿವೆ ಎನ್ನದಿರಲು ಸಾಧ್ಯವಿಲ್ಲ.

ಇನ್ನೀಗ ಕ್ರಿಯಾಸಮಾಸವೊಂದನ್ನೇ ಅನುಲಕ್ಷಿಸಿ ಹೇಳುವುದಾದರೆ–"ಸಂಯುಕ್ತ ಕ್ರಿಯಾವಾಚಿ ಪದರಚನೆಯೂ ಕ್ರಿಯಾಸಮಾಸವೆಂದೇ ಆಗುತ್ತದೆ" (1993 ಕ.ಲೋ.) ಎನ್ನಲಾಗಿದೆ. ಇದನ್ನು ಲೇಖಕರು ಡಾ|| ಕೆ. ಕುಶಾಲಪ್ಪ ಗೌಡರ ಮಾತಿನಿಂದ ಸಮರ್ಥಿಸಿದ್ದಾರೆ. ಕುಶಾಲಪ್ಪ ಗೌಡರ ನಿರೂಪಣೆಯಿದು– "ಕ್ರಿಯಾ+ನಾಮ, ನಾಮ + ಕ್ರಿಯಾಪದಗಳ ಸೇರುವಿಕೆಯಿಂದ ನಿಷ್ಪನ್ನವಾದ ಪದ ನಾಮಪದವಾಗಿದ್ದರೆ ಅದನ್ನು ಕ್ರಿಯಾಸಮಾಸವೆಂದು ಕರೆಯಬಹುದು." ಹೀಗೆ ಹೇಳಿಕೊಂಡರು ಅದನ್ನು ಸಮರ್ಥಿಸುವುದರಲ್ಲಿ ಸೋತಿರುವುದನ್ನು ಇವರು ಲಕ್ಷಿಸಿಲ್ಲ. 'ಕ್ರಿಯಾ + ನಾಮ ಸೇರುವ ತೂಗುಂದೊಟ್ಟಿಲ್, ಸುಡುಗಾಡು, ಇರ್ದುಗಿರ್ಚು –ಎಂಬಂತಹ ಸಮಾಸ ಪದಗಳು ಕರ್ಮಧಾರಯವಾಗುತ್ತವೆ' ಎಂದು ಅವರದೇ ಹೇಳಿಕೆಯಿದೆ. ಅಷ್ಟೇ ಅಲ್ಲ, ಡಾ. ಕುಶಾಲಪ್ಪ ಗೌಡರು ನಾಗವರ್ಮ ಕೇಶಿರಾಜ ಭಟ್ಟಾಕಲಂಕರನ್ನು ಉಲ್ಲೇಖಿಸಿ,

"ಈ ಮೂವರೂ ಕ್ರಿಯೆ + ಕ್ರಿಯೆಯನ್ನು ಬಿಟ್ಟು ಕೊಟ್ಟಿರುವುದು ತಾತ್ತ್ವಿಕ ನೆಲೆಯ ಕೊರತೆಯೆನ್ನಬೇಕು. ಎಂದು ತಪ್ಪಾಗಿಯೇ ಹೇಳಿರುವುದನ್ನು ಶ್ರೀ ವಾರಿಯವರು ಉಲ್ಲೇಖಿಸಿ, ನೆಲೆಗಟ್ಟಿಲ್ಲದ ಹೇಳಿಕೆಯನ್ನು ಒಪ್ಪಿಕೊಂಡು ವರ್ತಿಸಿರುವುದು ಆಶ್ಚರ್ಯಕರವೇ ಸರಿ!

ಶ್ರೀವಾರಿಯವರು ಕ್ರಿಯಾಸಮಾಸಕ್ಕೆ ಲಕ್ಷ್ಯವಾಗಿ ಇಂಗ್ಲಿಷ್-ಕನ್ನಡ ಜೋಡಣೆಯ ಪದಗಳನ್ನು ಹೀಗೆ ಉದಾಹರಿಸಿದ್ದಾರೆ-ಸಸ್ಪೆಂಡ್ ಮಾಡು, ಅಡ್ಜಸ್ಟ್ ಮಾಡು- ಇತ್ಯಾದಿ. ಇಂದಿನ ಬಳಕೆಯ ಇಂಗ್ಲಿಷ್ ಬೆರಕೆಯ ಪ್ರಯೋಗಗಳಿಂದ ಕ್ರಿಯಾಸಮಾಸಕ್ಕೆ ಮಾತ್ರವಲ್ಲ, ಇತರ ಸಮಾಸಗಳಿಗೂ ಹಾಸ್ಯಕ್ಕಾಗಿ ಉದಾಹರಣೆಕೊಡಬಹುದು – ಅರ್ಲೀ ಮಾರ್ನಿಂಗ್ ಪ್ರೇಯರ್ ಬೈಹಾರ್ಟ್ ಮಾಡಿದನು. ಹೇಂಡ್ ಕರ್ಚಿಫ್ ಫೋರ್ಗೆಟ್ ಮಾಡದಿರು-ಇತ್ಯಾದಿಯನ್ನು ಅನುಕರಣ ಸಮಾಸವೆಂದೋ ವಿಡಂಬನ ಸಮಾಸವೆಂದೋ ಹೇಳಬಹುದಲ್ಲವೆ ? ಹಿಂದಿನ ವೈಯಾಕರಣರು ಸಂಸ್ಕೃತವನ್ನು ಕನ್ನಡದಲ್ಲಿ ಬೆರಸಿ ಮಾತಾಡುವುದನ್ನು ಅರಿಸಮಾಸವೆಂದು ಹೇಳಿದರು. ಆದರೆ ಇಂದಿನವರು ಅದನ್ನು ಪುರಸ್ಕರಿಸುವ ಮೂಲಕ ಕೃತಕ ಪ್ರಗತಿ ತೋರಿಸುತ್ತಿದ್ದಾರೆ ! ಈ ನೆಲೆಯಲ್ಲಿ ಇಂಗ್ಲಿಷ್ + ಕನ್ನಡ ಬೆರೆತ ಸಮಾಸ ಪದಗಳು ಆಡುನುಡಿಯಲ್ಲಿ ಬಂದರೂ ಶುದ್ಧ ಸಾಹಿತ್ಯದಲ್ಲಿ ನೋಡಿಕೊಳ್ಳುವುದೇ ಲೇಸಲ್ಲವೆ?

ಶ್ರೀ ವಾರಿಯವರು 'ಕನ್ನಡದ ಕ್ರಿಯಾಸಮಾಸ- ಒಂದು ಪುನರಾವಲೋಕನದಲ್ಲಿ ಇನ್ನಷ್ಟು ಹೊಸತೆನಿಸುವಂತೆ, ವ್ಯಾಕರಣ ಹೀನವಾದ ಗ್ರಾಮ್ಯವನ್ನು ಮಂಡಿಸಿದ್ದಾರೆ. ಬಾದಾಮಿ ತಾಲೂಕಿನ ಚಾಲ್ತಿಯ ರೂಪಗಳನ್ನು ಕ್ರಿಯಾಸಮಾಸದ ಎರಡು ಮುಖಗಳನ್ನು ಕಾಣಿಸುವಂತೆ ಉದಾಹರಿಸಿದ್ದಾರೆ. ಇವುಗಳಲ್ಲಿ ಹೆಚ್ಚಿನವೂ ಸಂಧಿದೋಷ ಸಮಾಸದೋಷಮಯವಾಗಿವೆ.

'ಅಡ್ಡಿ + ಆಗು — ಅಡ್ಡಾಗು' ಇಲ್ಲಿ 'ಅಡ್ಡಿಯಾಗು' ಎಂಬುದು ಸರಿಯಾದುದಷ್ಟೆ ? ಗಂಟು + ಬೀಳು ಎಂಬುದನ್ನು 'ಗಂಟ್ ಬೀಳು' ಎನ್ನುವುದು ವ್ಯಾಕರಣ ಶುದ್ಧತೆಯಲ್ಲ. ಇಂತಹವೆಲ್ಲ ಜಾನಪದ ಉಚ್ಚಾರಣೆಗಳೆಂಬುದು ನಿಜ. ಮಾನ್ಯ ಲೇಖಕರು ಇಲ್ಲಿ ಎರಡು ಪುಟಗಳಷ್ಟು ಅವ್ಯಾಕರಣವನ್ನು ಹಾಗೆ ಹೇಳಿಕೊಳ್ಳದೆ, ಓದುಗರ ಮುಂದಿಟ್ಟಿದ್ದಾರೆ. ಈ ಸಂದರ್ಭದಲ್ಲಿ ನಾವು ಮುಖ್ಯವಾಗಿ ತಿಳಿದು ನೆನಪಿಟ್ಟುಕೊಳ್ಳುವ ಸಂಗತಿಗಳಿವೆ—ನಮ್ಮ ಕನ್ನಡಕ್ಕೆ ಆಡುಮಾತಿನ ರೂಪಗಳಿವೆ; ಹಾಗೆಯೇ ಗ್ರಾಂಥಿಕ ರೂಪವೂ ಇದೆ. ಇವನ್ನು ಬೆರೆಸಲು ಅಡ್ಡಿಯಿಲ್ಲ. ಆದರೆ, ಭಾಷಾವಿದರಿಗೆ ಯಾವುದು ಜಾನಪದ ಯಾವುದು ಗ್ರಾಂಥಿಕ ಅಥವಾ ಶಿಷ್ಟರೂಪ ಎಂಬ ಅರಿವಿರಬೇಕು ಜಾನಪದ, ದೇಸಿ. ವ್ಯಾವಹಾರಿಕ ಅಥವಾ ಗ್ರಾಮ್ಯಭಾಷಾರೂಪಗಳು ಅಸಂಖ್ಯ. ಅವಕ್ಕಿರುವ ವ್ಯಾಕರಣ ಪರಿಮಿತ. ಅವುಗಳ ಪ್ರಯೋಗಕ್ಕೆ ಶುದ್ಧಾಶುದ್ಧತೆಯ ನಿರ್ಣಯವಿಲ್ಲ.

ಜನರು ಪ್ರಯೋಗಿಸುವ ವಿಧಾನವೇ ಮಾನದಂಡ. ಹೇಗೆ ಮಾತನಾಡುತ್ತಾರೆ ಎಂಬುದೇ ಲಕ್ಷಿತ. ವಾಕ್ಯರಚನೆಯಲ್ಲಿ ಲಿಂಗ, ವಚನ, ವಿಭಕ್ತಿಗಳಿರಬಹುದು ; ಕೇಳತಕ್ಕವನಿಗೆ ಗೊತ್ತಾದರಾಯಿತು. ಶಬ್ದಶುದ್ಧಿ ಅವಶ್ಯವಿಲ್ಲ. ಉದಾ : ದ್ಯಾವರು (ದೇವರು) ತ್ವಾಟ, (ತೋಟ), ದ್ಯಾವೇ ಗೌಡ್ರು, (ದೇವೇಗೌಡರು), ಯೇಳಿದ್ರು (ಹೇಳಿದರು). ವೋದ್ರು (ಹೋದರು), ಯೆಂಡ್ರು (ಹೆಂಡಿರು), ಅವ್ನೆ (ಇದ್ದಾನೆ), ಐತೆ (ಇದೆ)— ಇಂತಹ ಪ್ರಯೋಗಗಳನ್ನು ವ್ಯಾಕರಣಕ್ಕೆ ಒಳಪಡಿಸುವುದಲ್ಲಿ ಅರ್ಥವಿಲ್ಲ. ಅಂತಹ ಗ್ರಾಮ್ಯರೂಪಗಳನ್ನು ಅವುಗಳಷ್ಟಕ್ಕೇ ಬಿಟ್ಟು, ಸಮಗ್ರ ಕರ್ನಾಟಕಕ್ಕೆ ಮಾನ್ಯವಾಗ ತಕ್ಕ ಶಿಷ್ಟಭಾಷೆಯೊಂದು ನಮ್ಮಲ್ಲಿ ಕವಿರಾಜಮಾರ್ಗಕಾರನಿಂದಲೇ ರೂಢಿಪಡೆದಿದೆ. ಅದನ್ನು ಲಾಕ್ಷಣಿಕವಾಗಿ ನಾವು ಬೆಳಸಬೇಕು. ವಿದ್ಯಾಲಯಗಳಲ್ಲಿ ಬೋಧನೆಯ ಭಾಷೆಯಾಗಿ, ಸಾಹಿತ್ಯಭಾಷೆಯಾಗಿ, ಅಧ್ಯಯನಭಾಷೆಯಾಗಿ ಪ್ರಚಲಿತವಾಗಿರುವ ಅಂತಹ ಸಿರಿಗನ್ನಡವನ್ನು ಗೆಲ್ಲಿಸುವ ಪ್ರಯತ್ನದಲ್ಲಿ ನಾವೆಲ್ಲ ಭಾಗಿಗಳಾಗಬೇಕು. ●

— ಟಿ. ಕೇಶವಭಟ್ಟ

# ಗ್ರಂಥಾವಲೋಕನ

---

ಇಗೋ ಕನ್ನಡ:

ಕನ್ನಡದ ಜನಪ್ರಿಯ ದಿನಪತ್ರಿಕೆಗಳಲ್ಲಿ ಒಂದಾಗಿರುವ ಪ್ರಜಾವಾಣಿಯನ್ನು ಇನ್ನಷ್ಟು ಜನಪ್ರಿಯಗೊಳಿಸಿದ ಅಂಕಣಬರಹ–ಇಗೋ ಕನ್ನಡ. ಇದು ೧೯೯೧ರಿಂದಲೇ ಪ್ರಾರಂಭಗೊಂಡಿದೆ. ಈ ಅಂಕಣಲೇಖಕರಾದ ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಸುಮಾರು ೪೦ ವರ್ಷ ಕಾಲೇಜಿನಲ್ಲಿ ಕನ್ನಡ ಕಲಿಸುತ್ತಾ ಬೋಧಕರಿಗೂ ಮಾರ್ಗದರ್ಶನ ಮಾಡಿದ ವಿದ್ವಾಂಸರು. ಕನ್ನಡಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು. ಪರಿಷತ್ತಿನ ಎಂಟು ಬೃಹತ್ ಸಂಪುಟಗಳ ನಿಘಂಟು ಸಮಿತಿಯ ಅಧ್ಯಕ್ಷರೂ ಆಗಿ, ನಿಘಂಟುರಚನೆಯಲ್ಲಿಯೂ ಪಳಗಿಸಿ ಕೊಂಡವರು. ಇವುಗಳೊಂದಿಗೆ ಸಾಹಿತ್ಯಕ್ಷೇತ್ರದಲ್ಲಿ ವಿಮರ್ಶೆ, ಸಂಶೋಧನೆ, ಗ್ರಂಥ ಸಂಪಾದನೆ, ಅನುವಾದರೂಪಗಳ ಕೃತಿಕರ್ತರು. ಹಲವು ಗೌರವ ಪುರಸ್ಕಾರಗಳನ್ನು ಪಡೆದ ಜ್ಞಾನಸಮೃದ್ಧ ವಯೋವೃದ್ಧರು. ಕರ್ನಾಟಕಲೋಚನ ಪತ್ರಿಕೆಯ ಪ್ರಧಾನಸಂಪಾದಕರೂ ಆಗಿದ್ದರು.

ಅವರ 'ಇಗೋ ಕನ್ನಡ' ಅಂಕಣಬರಹಗಳು ವೈಶಿಷ್ಟ್ಯಪೂರ್ಣವಾದವು. ಕನ್ನಡನಾಡಿನ ಮತ್ತು ಹೊರನಾಡುಗಳ ಓದುಗರು-ಮುಖ್ಯವಾಗಿ ಅಧ್ಯಾಪಕರು, ವಿದ್ಯಾರ್ಥಿಗಳು, ಇತರ ಆಸಕ್ತರು ಹಾಗೂ ಸಾಮಾನ್ಯರು ತಮಗೆ ಕನ್ನಡದಲ್ಲಿ ಕಂಡುಬಂದ ಪ್ರಯೋಗಗಳ ಶಬ್ದರೂಪನಿರ್ಣಯಕ್ಕಾಗಿ, ಅವುಗಳ ಅರ್ಥವಾಹಕತೆಗಾಗಿ ಆಗಾಗ ಕಳುಹಿದ ಪ್ರಶ್ನೆಗಳಿಗೆ ವಿವರಣಾತ್ಮಕವಾದ ಉತ್ತರಗಳ ರೂಪವಾದುದು-ಇಗೋ ಕನ್ನಡ. ಅಂತಹ ಅಂಕಣದ ಶಬ್ದಾರ್ಥ ವಿವರಣೆಗಳನ್ನು ಅಕಾರಾದಿಯಾಗಿ ಸಂಕಲಿಸಿದ ಈ ನಿಘಂಟನ್ನು 'ಸಾಮಾಜಿಕ ನಿಘಂಟು' ಎಂದಿಲ್ಲಿ ಕರೆಯಲಾಗಿದೆ.

ಇದು ಇತರ ಕನ್ನಡನಿಘಂಟುಗಳಂತಲ್ಲ, ಕನ್ನಡದ ಪ್ರಚಲಿತ ಶಬ್ದಸಾಗರದಿಂದ ಆಯ್ದ ರತ್ನಗಳಿಗೆ ಬೆಲೆಕಟ್ಟುವ ಕಾರ್ಯ ಇದರ ಉದ್ದಕ್ಕೂ ನಡೆದಿದೆ. ಸಾಗರವು ತನ್ನದೇ ಆದ ಒರತೆನೀರು, ಮಳೆನೀರು, ಹೊಳೆನೀರು ಎಂಬ ಮೂಬಗೆಯ ನೀರಿನಿಂದ ಮುನ್ನೀರೆ

---

ಲೇ : ಪ್ರೊ|| ಜಿ. ವೆಂಕಟಸುಬ್ಬಯ್ಯ ಪ್ರ: ನವಕರ್ನಾಟಕ ಪಬ್ಲಿಕೇಶನ್ಸ್, ಎಂ.ಬಿ.ಸಿ.ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು–560 001.
ಆಕೃತಿ : ಡೆಮ್ಮಿ 1/8, ಪುಟಗಳು : 448. (ಪ್ರ. ಮು.1996) ಬೆಲೆ : ಸಾಮಾನ್ಯ ಪ್ರತಿ : ರೂ. 140–00 ವಿಶೇಷ ಪ್ರತಿ : ರೂ. 150–00.

ಸಿಸಿದಂತೆ–ಈ ಕೋಶಸಾಗರದಲ್ಲಿ ತದ್ಭವಗಳನ್ನೂ ಒಳಗೊಂಡ ದೇಶೀಶಬ್ದಗಳು, ಸಮ ಸಂಸ್ಕೃತಶಬ್ದಗಳು ಮತ್ತು ಅನ್ಯದೇಶಿ (ಫಾರ್ಸಿ, ಹಿಂದಿ, ಮರಾಠಿ, ಅರಬಿ–ಮುಂತಾದ) ಶಬ್ದಗಳು ವಿವರಣೆಗೆ ಪಾತ್ರವಾಗಿವೆ. 'ಈ ನಿಘಂಟಿಗೆ ಒಂದು ಪ್ರವೇಶ ಸಿದ್ಧತೆ' ಎಂಬ ಪ್ರಾಸ್ತಾವಿಕ ಭಾಗದಲ್ಲಿ ಮಾನ್ಯಲೇಖಕರು ಸಾಮಾಜಿಕ ಭಾಷಾಶಾಸ್ತ್ರ ವ್ಯಾಸಂಗಕ್ಕೆ ಒಳಪಡುವ ಅಭ್ಯಾಸಕ್ಷೇತ್ರಗಳನ್ನೂ ಭಾಷಾಧ್ಯಯನದ ಮರ್ಮವನ್ನೂ ಶಾಸ್ತ್ರೀಯವಾಗಿ ನಿರೂಪಣೆ ಮಾಡಿರುತ್ತಾರೆ. ಅನೇಕ ವಾಕ್ಪ್ರಯೋಗಗಳ ಸ್ವರೂಪವನ್ನೂ ಅವುಗಳ ಅರ್ಥಸಮಸ್ಯೆಯನ್ನು ಪ್ರಸ್ತಾಪಿಸಿ ವಿವರಿಸಿದ್ದಾರೆ. ಅದರಂತೆ ಕನ್ನಡದಲ್ಲಿ ಫಾರ್ಸಿ-ಅರಬಿ–ಮುಂತಾದ ಅನ್ಯದೇಶೀಶಬ್ದಗಳು ಏಕೆ, ಹೇಗೆ, ಮಾರ್ಪಟ್ಟು ಸೇರಿಕೊಂಡು ವೆಂಬುದನ್ನು ಐತಿಹಾಸಿಕ ಕಾರಣಗಳಿಂದಲೂ ವಿಶದಪಡಿಸಿದ್ದಾರೆ. ಕನ್ನಡದಲ್ಲಿ, ಕೆಲ ಮಟ್ಟಿಗೆ ಸಂಸ್ಕೃತದಲ್ಲಿ ಕೂಡ ಪರಿಣತಿಯುಳ್ಳವರಿಗೂ ತೃಪ್ತಿಕರವಾಗಿ ಸಂದೇಹ ಪರಿಹಾರ ವಾಗದಿರುವ ಅನೇಕ ಶಬ್ದ–ಅರ್ಥಸಮಸ್ಯೆಗಳ ಪರಿಹಾರಗಳನ್ನಿಲ್ಲಿ ನಾವು ಕಾಣುತ್ತೇವೆ. ಶಬ್ದಪ್ರಯೋಗವೊಂದನ್ನು ಪ್ರಸ್ತಾಪಿಸಿ, 'ಇದರ ಅರ್ಥವೇನು?' ಎಂದು ಕೇಳಲಾದುದಕ್ಕೆ ಸರಿಯಾದ ಉತ್ತರವಿಲ್ಲದ್ದರೂ, ಇನ್ನೂ ಒಂದು ಅರ್ಥ ನಮಗೆ ಹೊಳೆಯಬಹುದಾದ ಪ್ರಸಂಗವೂ ಇಂತಹ ನಿಘಂಟಿನಲ್ಲಿರುವುದು ಅವಾಸ್ತವವೇನೂ ಅಲ್ಲ.

ಉದಾಹರಣೆಗಾಗಿ—'ಕರತಲಾಮಲಕ' ಎಂಬುದಕ್ಕೆ 'ಅಂಗೈಯ ನೆಲ್ಲಿಕಾಯಿ' ಎಂಬರ್ಥವಾಗಿದ್ದು 'ಪರಿಪೂರ್ಣ ಜ್ಞಾನ' ಎಂದು ಅದರ ಗಮ್ಯಾರ್ಥವನ್ನು ಮಾನ್ಯ ಲೇಖಕರು ಸರಿಯಾಗಿಯೇ ನಿರೂಪಿಸಿದ್ದಾರೆ. ಇದೇ ಸಮಾಸ ಪದಕ್ಕೆ ಇನ್ನೊಂದು ಬಗೆಯಾಗಿಯೂ ಅರ್ಥವಿದೆ–ಕರತಲ + ಅಮಲ + ಕ– ಅಂದರೆ, ಅಂಗೈಯ ನಿರ್ಮಲ ವಾದ ನೀರು ಎಂದೂ ಆಗಬಹುದು. ಅಂಗೈಯಲ್ಲಿ ನಿರ್ಮಲ ಜಲವಿದ್ದರೆ ಅದೆಷ್ಟು ಪಾರದರ್ಶಕವೆಂದರೆ–ಆ ನೀರು ಮಾತ್ರವಲ್ಲ, ಅದರ ತಳದ ಅಂಗೈಯ ರೇಖೆಗಳೂ ಸ್ಪಷ್ಟ ವಾಗಿ ದೃಗ್ಗೋಚರವಾಗುವವು ; ಎಲ್ಲವೂ ಸರಿಯಾಗಿ, ಸ್ಪಷ್ಟವಾಗಿ ಕಾಣಿಸುವವೆಂಬುದು ನೆಲ್ಲಿಕಾಯಿ ಎಂಬರ್ಥಕ್ಕಿಂತಲೂ ಹೆಚ್ಚು ಸಮರ್ಪಕವೆಂದು ನನಗೆ ಸಂಸ್ಕೃತವನ್ನು ಕಲಿಸಿದ ಪಂಡಿತರು ತಿಳಿಸಿರುವುದುಂಟು. ಸಮಗ್ರವಾಗಿ ಈ ನಿಘಂಟನ್ನು ನೋಡುತ್ತಾ ಹೋದರೆ ಸಮಯ ಹೋದುದೆ ಗೊತ್ತಾಗದೆ. ನಾವು ಅರಿವಿನ ಹೊಸಹೊಸ ಹೊಳಪನ್ನು ಪಡೆಯುತ್ತೇವೆ.–ಎಂಬುದಕ್ಕೆ ನನ್ನ ಈ ಉದಾಹರಣೆ. ಆದುದರಿಂದ ಒಮ್ಮೆ ನೋಡಿ ಆಚೆಗಿಡುವ ನಿಘಂಟು ಇದಲ್ಲ.

ಇಂತಹದೊಂದು ನಿಘಂಟು ಕನ್ನಡಕ್ಕಿಲ್ಲದ ಕೊರತೆ ಈಗ ಪರಿಹಾರವಾಗಿದೆ. ಮಾನ್ಯ ಲೇಖಕರು 'ಇಗೋ ಕನ್ನಡ' ಅಂಕಣವನ್ನು ಈಗಲೂ ಮುಂದುವರೆಸುತ್ತಿರುವುದರಿಂದ ಈಗ ಬಿಟ್ಟಿರಬಹುದಾದುವನ್ನು ಮುಂದೆ ಸೇರಬಹುದಾದುವನ್ನು ಒಳಗೊಂಡ ಇನ್ನೊಂದು ಬೃಹನ್ನಿಘಂಟನ್ನು ಓದುಗರು ಇದಿರುನೋಡುವುದು ವಾಸ್ತವವೇ ಸರಿ. ಅದಕ್ಕಾಗಿ ಈ

ನಿಘಂಟು ಎಲ್ಲ ಕನ್ನಡಿಗರ ಕರತಲಾಮಲಕವಾಗುವಂತೆ ತನ್ಮೂಲಕ ಕನ್ನಡಿಗರ ಜ್ಞಾನ ವೃದ್ಧಿಯೂ ಭಾಷಾಪ್ರಯೋಗ ಪರಿಣತಿಸಿದ್ಧಿಯೂ ಆಗುವಂತೆ ಆಶಿಸಬಹುದು.

ಟಿ. ಕೇಶವ ಭಟ್ಟ

## ಪರಿಣಯ ಪ್ರಬಂಧ :

ಮಾನವನ ಆಶ್ರಮಧರ್ಮ ಜೀವನದಲ್ಲಿ ಬ್ರಹ್ಮಚರ್ಯಾಶ್ರಮವನ್ನು ವಿದ್ಯಾರ್ಜನೆಯ ಮೂಲಕ ಸದ್ವಿನಿಯೋಗಿಸಿ, ಗೃಹಸ್ಥಾಶ್ರಮಕ್ಕೆ ಕಾಲಿಡುವ ಶುಭ ಸಂಸ್ಕಾರವೇ ಪರಿಣಯ. ಇದನ್ನು ಕನ್ನಡದಲ್ಲಿ ಮದುವೆಯೆಂದು, ಸಂಸ್ಕೃತದಲ್ಲಿ ವಿವಾಹವೆಂದು ಕರೆಯುತ್ತಾರೆ. ಅಂತಹ ವಿವಾಹವನ್ನು ವೈದಿಕಮಂತ್ರ ವಿಧಿಪೂರ್ವಕ ಆಚರಿಸುವ ಬ್ರಾಹ್ಮ ವಿವಾಹದ ಕಟ್ಟುಕಟ್ಟಳೆಗಳನ್ನು ಆಧಾರಪೂರ್ವಕವಾಗಿ ವಿವರಿಸುವ ಕೃತಿಯಿದು.

ಇದರಲ್ಲಿ ಪರಿಣಯದ ಅಂಗಗಳಾಗಿ ಸಮಾವರ್ತನದಿಂದ ಪ್ರಾರಂಭಿಸಿ ಗೃಹ ಪ್ರವೇಶದವರೆಗಿನ ಮಂತ್ರಸಂಕಲ್ಪ ಸಹಿತವಾದ ಕಾರ್ಯಾಂಗಗಳನ್ನು ಒಂದೊಂದಾಗಿ ವಿವರಿಸಲಾಗಿದೆ ಈ ಸಂಪ್ರದಾಯಗಳ ಆಚರಣೆ ಹಿಂದಿನಿಂದಲೇ ಹೇಗೆ ನಡೆದು ಬಂದಿದೆ ಎಂಬುದನ್ನು ಕನ್ನಡ ಕವಿಗಳಾದ ಪಂಪ, ರುದ್ರಭಟ್ಟ, ಹರಿಹರ, ರತ್ನಾಕರವರ್ಣಿ ತೊರವೆಯ ನರಹರಿ–ಇವರೆಲ್ಲ ತಮ್ಮ ಕಾವ್ಯಗಳಲ್ಲಿ ಆಲಂಕಾರಿಕವಾಗಿ ವಿವರಿಸಿರುವುದನ್ನು ಕಾವ್ಯೋಕ್ತವಾಗಿ ಪ್ರಸ್ತಾಪಿಸಲಾಗಿದೆ. ಕೊನೆಯದಾಗಿ ಲೇಖಕರು ತಮ್ಮ ರಚನೆಯ ಹೈಮವತಿ ಪರಿಣಯ–ಎಂಬ ಪದ್ಯ ಕಾವ್ಯದಿಂದಲೂ ಉದಾಹರಿಸಿದ್ದಾರೆ. ಅನಂತರ, ಸಹಬಂಧ ಎಂಬ ಭಾಗದಲ್ಲಿ ಮಗಳಿಗೆ ಬುದ್ಧಿವಾದ, ಅಳಿಯನಿಗೆ ಹಿತೋಕ್ತಿ ಇವನ್ನು ಪಂಪನ ಆದಿಪುರಾಣದಿಂದ ಆಯ್ದುಕೊಡಲಾಗಿದೆ. ಸರ್ವಜ್ಞಕವಿಯ ಸ್ತ್ರೀ ಸ್ತುತಿಯ ತ್ರಿಪದೀ ಪದ್ಯಗಳನ್ನು ಉಲ್ಲೇಖಿಸಲಾಗಿದೆ. ಕೊನೆಗೆ ಶುಭಾಶಂಸನ, ದಶ ಸೂತ್ರಮಧುರೋಕ್ತಿಗಳ ಪದ್ಯಗಳು ವಿವರಣಪೋಷಕಗಳಾಗಿವೆ.

ಕಾವ್ಯೋದಾಹೃತ ಪದ್ಯಗಳಿಗೆ ಕೊನೆಗೆ ಅನುವಾದ ಭಾಗವಿದೆ. ಇದರಿಂದ ಓದುಗರಿಗೆ ಪದ್ಯಗಳನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ. ಇನ್ನೂ ಕೊನೆಗೆ ಪಂಚಾಮೃತ, ಪಂಚಫಲ, ಸಮಿತು, ಚತುರ್ದಶ ವಿದ್ಯೆಗಳು–ಮುಂತಾದ ಸಂಖ್ಯಾ ಸಂಜ್ಞಾರ್ಥವಿವರವಿದ್ದು, ವಿವಾಹ ವಿಷಯಕ ಪರಿಜ್ಞಾನಕ್ಕೆ ಈ ಕೃತಿಯೊಂದು ಕೈಗನ್ನಡಿ

---

ಲೇಖಕರು, ಪ್ರಕಾಶಕರು : ಗಮಕಿ. ಆರ್. ಸತ್ಯನಾರಾಯಣ್, ಸತ್ಯಶ್ರೀ ಪ್ರಕಾಶನ, ನಂ. 67, ಐಟಿಐ ಬಡಾವಣೆ, ವಿದ್ಯಾಪೀಠ, ಬನಶಂಕರಿ 3ನೇ ಹಂತ, ಬೆಂಗಳೂರು–560 085. ಆಕೃತಿ : ಕ್ರೌನ್ 1/8, ಪುಟಗಳು : 1169. ಬೆಲೆ : ರೂ. 25–00 (ಪ್ರ. ಮು, 1996)

ಯೋಗ್ಯವಾಗಬಲ್ಲುದು. ಮದುವೆ ಆಗುವವರಿಗೂ ಆದವರಿಗೂ ಮದುವೆ ಮಾಡಿಸುವವರಿಗೂ ಇಂತಹ ವಿಷಯವನ್ನು ತಿಳಿವ ಕುತೂಹಲವುಳ್ಳವರಿಗೂ ಮನೋವೇದ್ಯವಾಗುವ ಈ ಕೃತಿರಚನೆ ಹಾಗೂ ಸ್ವಯಂ ಪ್ರಕಾಶನ ಶ್ಲಾಘ್ಯವಾಗಿದೆ. ಜನರ ಮೆಚ್ಚುಗೆಗೆ ಪಾತ್ರವಾಗಿದೆ.

ಟಿ. ಕೇಶವಭಟ್ಟ

## ಯುಗವಾಣಿ : ಕವನ ಸಂಗ್ರಹ

ಕವಿ ದೊಡ್ಡರಂಗೇಗೌಡರ "ಯುಗವಾಣಿ" ಕವನಸಂಗ್ರಹ "ಪ್ರಚಲಿತ ಸಮಾಜಕ್ಕೆ ಹಿಡಿದ ಕನ್ನಡಿ" ಎಂಬ ಮಾತು ವಸ್ತುದೃಷ್ಟಿಯಿಂದ ಸ್ವೀಕಾರಾರ್ಹ. "ಕವಿವಾಣಿ ಯಾವತ್ತೂ ಯುಗವಾಣಿ ಆಗಬೇಕು" ಎನ್ನುವ ಕವಿ "ಸಮಾಜಮುಖಿಯಾದ ಕವಿಯ ಕಾವ್ಯವಾಣಿಯೇ ವೈಚಾರಿಕ ಕ್ರಾಂತಿಗೆ ಕಹಳೆಯಾಗಬೇಕು" ಎಂದೂ 'ನಿವೇದನೆ'ಯಲ್ಲಿ ನುಡಿದಿದ್ದಾರೆ. ಈ ಮಾತುಗಳಿಗೆ ಅನುಗುಣವಾಗಿ ಕವಿಯ ಸಾಮಾಜಿಕ ಜವಾಬ್ದಾರಿಯ ದಾಖಲೆಗಳಿಗೆ ಈ ಸಂಗ್ರಹದ ಕವನಗಳು ತಮ್ಮಂತರಂಗವನ್ನು ತೀರಾ ವಾಚ್ಯವಾಗಿ ತೆರೆದುಕೊಳ್ಳುತ್ತವೆ. ಇಲ್ಲಿನ ಬಹುತೇಕ ಕವಿತೆಗಳು 'ಕಾವ್ಯ'ವಾಗದೆ, ಹಾಡು'ಗಳಾಗಿವೆ.

"ಅಸಹಾಯಕಸ್ಥಿತಿಯಲ್ಲೂ ಬಂಡಾಯದ ಘಟ್ಟಧ್ವನಿ" ಗೌಡರದು. ನಾಗರಿಕ ಬದುಕಿನ ಗೊಂದಲ, ಕ್ರೌರ್ಯ, ರಾಜಕಾರಣಿಗಳ ಭ್ರಷ್ಟಾಚಾರ, ಅನಕ್ಷರಸ್ಥರ ಬವಣೆ. ವಿದ್ಯಾಭ್ಯಾಸದ ನಿರರ್ಥಕತೆ, ಯುವಜನಾಂಗದ ಅಶಿಸ್ತು, ಸಾಮಾಜಿಕ ಅಸಮಾನತೆ–ಶೋಷಣೆ, ಜನರ ಅನಾಥಪ್ರಜ್ಞೆ–ಹೀಗೆ ನೂರೆಂಟು ಸಮಾಜಮುಖೀ ಚಿಂತನೆಯ ಘಟ್ಟಧ್ವನಿಗಳು. "ನೋವುಂಡ ಕವಿ ತಾನು ಕವಿತೆ ಕಟ್ಟದರೇನು ?" ಎನ್ನುತ್ತ, ದಲಿತರ ನೋವಿಗೆ ರಾಗವಾಗುವ ಆಶಯವನ್ನು ಕವಿ ವ್ಯಕ್ತಪಡಿಸುತ್ತಾರೆ. ತಾನೇನೂ ಮಹಾಕವಿಯಲ್ಲ ಎಂಬ ವಿನಯ ಕವಿಗಿದೆ ; 'ಕಂಸಿದ್ಧ'ದಲ್ಲಿ ಕುವೆಂಪು ಹೇಳಿಕೊಂಡ ಹಾಗೆ.

"ಗೊಬ್ಬರ ತುಂಬಿದ ಕೈಬರೆದ ಮಣ್ಣಿನ ಹಾಡು ನನ್ನದು
ಸಗಣಿ ಮೆತ್ತಿದ ಬೆರಳು ಹಿಡಿದ ಗ್ರಾಮೀಣ ಲೇಖನಿ ನನ್ನದು" (ಹೆಜ್ಜೆ

---

ಪ್ರ: ಕನ್ನಡ ಕಣ್ಮಣಿ ಪ್ರಕಾಶನ, 124, ಕೃಷ್ಣ ಬಿಲ್ಡಿಂಗ್ಸ್, ಅವೆನ್ಯೂರಸ್ತೆ, ಬೆಂಗಳೂರು-2.
ಪುಟ : 104 ಬೆಲೆ : ರೂ. 30–00.

ಗುರುತು) ಹೀಗೆ ತಮ್ಮ 'ಹೆಜ್ಜೆ ಗುರುತಿ'ನೊಂದಿಗೆ ಸಾಗುವ ಕವಿ, ಈ ಜಗದ ನೂರೆಂಟು ಹೆಜ್ಜೆಗಳನ್ನೂ ಗುರುತಿಸುತ್ತಾರೆ ;

ಬಂದರೋ ಬಂದರು ಮುಖವಾಡದವರು ಬಂದರು
ಆಸೆ ಆಮಿಷ ತೋರುವ ಖಾದಿ ಜನರು ಬಂದರು(ಮುಖವಾಡದವರು)
ತಿಂದು ತೇಗಿ ದೇಶವೆಲ್ಲ
ಸಾಲದ ಹೊರೆಯಲಿ ನರಳಿಹುದಲ್ಲ (ನಗ್ನಸತ್ಯ)
ಹಗಲು-ಇರುಳು ಉಪವಾಸ ಬಿದ್ದಿಹರು
ಹಾದಿಬೀದಿಯ ಈ ದಲಿತರು (ದಿಕ್ಕುದೆಸೆ ಇಲ್ಲದವರು)
ನಗರಬಾಳುವೆ ನಿತ್ಯ ನರಕ (ಒಂದು ವೃತ್ತದ ಸುತ್ತ)
ಶಿಕ್ಷಣದ ಹೆಸರಲ್ಲಿ ವ್ಯಾಪಾರ ಮಾಡುವ
ಕಲೆಯ ರಂಗದಲ್ಲಿ ವಿಷಬಲೆ ಹೆಣೆಯುವ
ವಿಪರ್ಯಾಸದಿಂದ ತಪ್ತನಾದೆ(ವಿರೋಧಾಭಾಸ)
ಅನ್ಯಹೆಣ್ಣು ಇವರಿಗೆ
ಬೊಂಬಾಟ್ ಬಾದಾಮಿ ಹಣ್ಣು (ಕೊಳಕುಮಂಡಲದ ಹಾವುಗಳು)
ಬಾಳಿ ಬದುಕಬೇಕಿದ್ದರೆ ಗಿಡನೆಡು ಮೊದಲು (ಪರಿಸರ ಗೀತೆ)

ಈ ಸಾಲುಗಳನ್ನು ಗಮನಿಸಿದಾಗ, ಕವಿ ಹೇಳುವ ವಿಚಾರಗಳು ಕಾವ್ಯವಾಗದೆ, ಘೋಷಣೆಗಳು ಇಲ್ಲವೇ ಹೇಳಿಕೆಗಳೋ ಆಗಿಬಿಟ್ಟಿವೆ. ಕಲಾಸಿಪಾಳ್ಯ, ಸಂಸ್ಕೃತಿ ಗೋರಿಯ ಮೇಲೆ-ಎಂಬೆರಡು ಕವಿತೆಗಳೂ 'ಒಂದೇ' ಕವಿತೆಯಾಗಿದ್ದು, 'ಅನ್ನಿಸಿಕೆ'ಯ ಹಂತದಲ್ಲೇ ಉಳಿದುಬಿಟ್ಟಿವೆ. ಮೇದಿನ, ರೈತ ಚಳವಳಿ, ಗುಮ್ಮುವ ಗಾಳಿ(ಹವಾಲಾ) ಯಂತಹ ಕವಿತೆಗಳು ತತ್ಕಾಲಕ್ಕೆ ಹುಟ್ಟಿಕೊಂಡ 'ಬಾಲಿಶಪದ್ಯ' ಗಳೆನಿಸುತ್ತವೆ. ಯಾರಿಗೆ ಹಬ್ಬ, ನಿಜವಾದ ಯುಗಾದಿ-ಕವಿತೆಗಳಂತೂ ಕೇವಲ 'ಸಾದೃಶ್ಯ'ದ ಮಟ್ಟದಲ್ಲೇ ನಿಂತು ಬಿಡುತ್ತವೆ. ಆಗೆಲ್ಲ ಕವಿಯ 'ಕಾವ್ಯಜೀವನದ ವಿಕಾಸ' ಬೆರಗು ಹುಟ್ಟಿಸದೆ, ನಿರಾಶೆಗೆ ತಳ್ಳುತ್ತದೆ.

ಆದರೂ- 'ಯುಪವಾಣಿ'ಯ ಬಂಜರು ನೆಲದಲ್ಲಿ 'ಕುರುಹುಗಳು', 'ಇವರು ನಮ್ಮವರು', "ನಾಡವರ ವ್ಯಥೆ-ಕತೆ', 'ಆ ಕೂಗು ಕೇಳಿಸದೆ ನಿಮಗೆ' 'ಆಕ್ರಾಂತ'-ದಂಥ ಏಳೆಂಟು ಗಟ್ಟಿಕಾಳುಗಳ ತೆನೆಗಳಿವೆ ಎಂಬುದೇ ಸಮಾಧಾನ.

ಈ ಸಂಗ್ರಹದ ಕವಿತೆಗಳನ್ನು ಆಯ್ಕೆ ಮಾಡಿದವರಾಗಲೀ, ಮುನ್ನುಡಿ ಬರೆದವರಾಗಲೀ ಕವಿಗೆ 'ನಿಜನ್ಯಾಯ' ಒದಗಿಸಿಲ್ಲ. ಹೊಗಳಿಕೆಯೇ ಮುನ್ನುಡಿಯಲ್ಲ!

ಇಷ್ಟಾಗಿಯೂ ದೊಡ್ಡರಂಗೇಗೌಡರಂಥ ಕವಿಗೆ 'ಮುನ್ನುಡಿ', 'ಹಾರೈಕೆ' ಇತ್ಯಾದಿಗಳ ಅಗತ್ಯವೇ ಇಲ್ಲ ; ಇದ್ದರೂ ಅವುಗಳನ್ನೂ ಬರೆದ ವ್ಯಕ್ತಿಗಳು ಕಾವ್ಯದ ಬಗ್ಗೆ ಮಾತಾಡುವ 'ಅಥೆಂಟಿಸಿಟಿ'ಯನ್ನು ಪಡೆದಿರಬೇಕು. ಹಾಗಿಲ್ಲದಾಗ, ಯಾವುದೇ 'ಸೃಜನಶೀಲತೆ' ತನ್ನ ಬೆಲೆ ಕಳೆದುಕೊಂಡು, ಒಂದು 'ಗುಂಪಿನ' 'ಉತ್ಪಾದನೆ' ಮಾತ್ರವಾಗಿ ಬಿಡುತ್ತದೆ.

"ಈ ಕವಿ ಬರೀ ಕಲ್ಪನೆಯ ಮಧುರಭಾವಲೋಕದಲ್ಲಿ ವಿಹರಿಸುತ್ತಾನೆ ಅನ್ನುವಂತಿಲ್ಲ. ವಾಸ್ತವದ ಕಟುಬದುಕಿನ ಅರಿವೂ, ಇಲ್ಲಿನ ಕಷ್ಟಕೋಟಲೆಗಳ ಪ್ರಜ್ಞೆಯೂ ಉಳ್ಳವನಾಗಿದ್ದಾನೆ-* ಎನ್ನುವ ರಘುನಾಥರ ಮಾತು ನಿಜವಾದರೂ, 'ಯುಗವಾಣಿ'ಯಲ್ಲಿ ಈ 'ಪ್ರಜ್ಞೆ' ಕೇವಲ 'ವಾಣಿ'ಯ ಹಂತದಲ್ಲೇ ನಿಂತು 'ಕಾವ್ಯ'ವಾಗುವುದರಲ್ಲಿ ಸೋತಿದೆ ಎನ್ನಲು ವಿಷಾದವಾಗುತ್ತದೆ.

ಎನ್. ನರಹರಿ

## ಶರಭ ಚಾರಿತ್ರ:

ವಿಷ್ಣುವಿನ ದಶಾವತಾರಗಳನ್ನು ಕುರಿತು ಭಾರತದ ಹಲವು ಭಾಷೆಗಳ ಪ್ರಾಚೀನ ಸಾಹಿತ್ಯದಲ್ಲಿ ಕೃತಿರಚನೆ ಆಗಿದ್ದು ಅವು ಜನಗಳಲ್ಲಿ ಬಹುವಾಗಿ ಪ್ರಚಾರದಲ್ಲಿವೆ. ಆದರೆ ಶಿವನ ಅವತಾರವನ್ನು ಕುರಿತಾಗಲಿ ಅಥವಾ ಅವನ ಅಂಶವಾದ ವೀರಭದ್ರನ ಅವತಾರವನ್ನು ಕುರಿತಾಗಲಿ ಹೆಚ್ಚಿನ ಕೃತಿರಚನೆಗಳು ಆದಂತೆ ಕಂಡುಬರುವುದಿಲ್ಲ. ದಕ್ಷ ಯಜ್ಞದಲ್ಲಿ ಅವಮಾನಿತಳಾದ ಶಿವಸತಿಯು ಪ್ರಾಣ ನೀಗಿದಾಗ ವೀರಭದ್ರಾವತಾರವಾದ ಕಥೆ ಒಂದಿಷ್ಟು ಪ್ರಚಾರದಲ್ಲಿದೆ. ಆದರೆ ನರಸಿಂಹನ ಉನ್ಮತ್ತತನವನ್ನು ಕೊನೆಗಾಣಿಸಲು ಶಿವನ ಆದೇಶದಂತೆ ವೀರಭದ್ರನು ಶರಭಾವತಾರ ತಾಳಿದನೆಂಬ ಆಖ್ಯಾನ. ಸಂಸ್ಕೃತದ ಶಿವ ಮಹಾ ಪುರಾಣದಲ್ಲಿದ್ದರೂ ಕನ್ನಡದಲ್ಲಿ ಇದ್ದಂತೆ ಕಂಡು ಬರುವುದಿಲ್ಲ. ಈ ಕೊರತೆಯನ್ನು ಪ್ರಸ್ತುತ ಗ್ರಂಥ ಪೂರೈಸಿ ಕೊಡುತ್ತದೆ.

ಶರಭ ಚಾರಿತ್ರದ ಕರ್ತೃ ನಿಶ್ಚಿಂತಾತ್ಮ; ಈತನ ಕಾಲ ಕ್ರಿ. ಶ. 1750 ಎಂದು ಕವಿಚರಿತ್ರೆಕಾರರ ಅಭಿಪ್ರಾಯ. ಶರಭಚಾರಿತ್ರ ರಚಿತವಾಗಿರುವುದು ಭಾಮಿನೀ ಷಟ್ಪದಿಯಲ್ಲಿ. ಇದರಲ್ಲಿ 10 ಸಂಧಿಗಳು 553 ಪದ್ಯಗಳೂ ಇವೆ. ಇದನ್ನು ಉಪ

---

ಸಂ : ಡಿ. ಸಿದ್ಧಗಂಗಯ್ಯ, ಪ್ರಕಾಶಕರು : ಶ್ರೀ ಜಗದ್ಗುರು ರಂಭಾಪುರಿ, ವೀರ ಸಿಂಹಾಸನ ಮಹಾ ಸಂಸ್ಥಾನ ಪೀಠ, ಬಾಳೆ ಹೊನ್ನೂರು 577 112 ಚಿಕ್ಕ ಮಗಳೂರು ಜಿಲ್ಲೆ.
ಪ್ರ.ಮು. 1997 ಡೆಮ್ಮಿ 2/8 ಪುಟXXVI + 117 + 65 ಬೆಲೆ : ರೂ. 40-00

ಲಬ್ಧವಿರುವ ಎರಡು ಹಸ್ತಪ್ರತಿಗಳನ್ನು ಅವಲೋಕಿಸಿ ಸಂಪಾದಿಸಿದ್ದಾರೆ ಶ್ರೀ. ಡಿ. ಸಿದ್ಧಗಂಗಯ್ಯನವರು. ಈ ಕೃತಿಯ ವೈಶಿಷ್ಟ್ಯವೆಂದರೆ ಶರಭ ಚಾರಿತ್ರೆಗೆ ಸಂಸ್ಕೃತ ಭಾಷೆಯಲ್ಲಿ ಆಕರ ಗ್ರಂಥಗಳಾಗಿರುವ ಶರಭೋಪನಿಷತ್‌ನ್ನು ಅನುಬಂಧ ಒಂದರಲ್ಲೂ, ಶ್ರೀ ಶಿವ ಮಹಾಪುರಾಣಮ್‌ನ ಶತರುದ್ರ ಸಂಹಿತೆಯ ದಶಮ, ಏಕಾದಶ ಹಾಗೂ ದ್ವಾದಶಾಧ್ಯಾಯದ ಪೂರ್ವಭಾಗದ 95 ಮತ್ತು 96ನೇ ಅಧ್ಯಾಯವನ್ನು ಅನುಬಂಧ ಮೂರರಲ್ಲೂ, ಅಲ್ಲದೆ ಗ್ರಂಥಾರಂಭದಲ್ಲಿ ಶೈವೇಕಾರಣಾಗಮದಲ್ಲಿನ ಶರಭಮೂರ್ತಿ ಧ್ಯಾನ ಸ್ತೋತ್ರವನ್ನೂ, ಗ್ರಂಥದ ಕಡೆಯಲ್ಲಿ ಶ್ರೀ ನೃಸಿಂಹಕೃತ ಶರಭೇಶ್ವರಾಷ್ಟೋತ್ತರ ಹಾಗೂ ಶತನಾಮಾವಳಿ ಸ್ತುತಿಯನ್ನೂ ಸಮಾವೇಶಗೊಳಿಸಿ' ಶರಭಾವತಾರಕ್ಕೆ ಸಂಬಂಧಿಸಿದ ಎಲ್ಲ ಸಾಹಿತ್ಯವನ್ನೂ ಒಂದೆಡೆ ಸಂಗ್ರಹಿಸಿರುವುದರಿಂದ ಈ ಕೃತಿಯು ಧಾರ್ಮಿಕ ಮನೋಭಾವದ ಶ್ರದ್ಧಾವಂತರಿಗೂ ಹಿಡಿಸುವುದಲ್ಲದೆ, ವಿದ್ವಾಂಸರ ವಿಶೇಷ ಪರಾಂಬರಿಕೆಗೆ ಉಪಯುಕ್ತವಾಗಲಿದೆ. ಗ್ರಂಥಾಂತ್ಯದಲ್ಲಿ ಸಂಸ್ಕೃತ ಶ್ಲೋಕಗಳಿಗೆ ಕನ್ನಡದಲ್ಲಿ ಅರ್ಥವನ್ನು ಕೊಟ್ಟಿರುವುದು ಈ ಮೂಲ ಆಕರಗಳ ಉಪಯುಕ್ತತೆಯನ್ನು ಹೆಚ್ಚಿಸಿದೆ.

"ನಿಜ ನಿಸ್ಸೀಮ ಮಹಾವೀರೇಶನು ನರಸಿಂಹನಿಗಾಗಿ ಭೂಲೋಕದಲ್ಲಿ ಶರಭೇಂದ್ರಾವತಾರದ ಲೀಲೆಯಲ್ಲಿ ಮೆರೆದನು" ಎಂದು ಆರಂಭವಾಗಿ ಸೋಮೇಶ್ವರ, ಪಾರ್ವತೀದೇವಿ ಮತ್ತು ವೀರೇಶ್ವರನನ್ನು ಸ್ತುತಿಸಿ ಈ ಕೃತಿಗೆ ಚಮತ್ಕೃತಿಯನ್ನು ನೀಡಲಿ ಎಂದು ಕವಿ ಮೊರೆ ಇಡುತ್ತಾನೆ ನಂತರ ಮತಂಗನೆಂಬ ರಾಕ್ಷಸನ ಕಥೆ, ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪುರ ಕಥೆ, ಪ್ರಹ್ಲಾದನ ಬವಣೆ, ನರಸಿಂಹಾವತಾರ, ಅವನ ರೌದ್ರದಿಂದ ತಲ್ಲಣ, ವೀರೇಶನವತಾರ, ನರಹರಿಯನ್ನು ಸಂಹರಿಸಿ ಅವನ ಚರ್ಮವನ್ನು ಧರಿಸುವಿಕೆ ಮತ್ತು ಈ ಕಥೆಯನ್ನು ಆಲಿಸಿದವರಿಗೆ ಫಲಪ್ರಾಪ್ತಿ–ಇವೆಲ್ಲವನ್ನು ಕವಿ ಸಾಂಗವಾಗಿ ವರ್ಣಿಸಿದ್ದಾನೆ.

ಕವಿಗೆ ಭಾಷೆಯ ಮೇಲೆ ಪ್ರಭುತ್ವವಿದೆ. ಭಾಮಿನಿ ಷಟ್ಪದಿಯಲ್ಲಿ ರಚಿಸಿದ ಈ ಕಾವ್ಯದಲ್ಲಿ ಮುಖ್ಯರಸ ರೌದ್ರ. ನರಹರಿಯು ಹಿರಣ್ಯಕಶಿಪುವನ್ನು ಕೊಲ್ಲುವ ಸನ್ನಿವೇಶದ ಒಂದು ಶಬ್ದ ಚಿತ್ರ ಹೀಗಿದೆ.

ಬೆಕ್ಕು ಪಕ್ಷಿಯ ಹಿಡಿಯಲದಟಿಂೞು
ಹೊಕ್ಕ ತತ್ತಿಗಳೈದೆ ದೆಸೆಯೊಳು
ಮಿಕ್ಕು ಪಾಯ್ವಂದದಲಿ ನರಹರಿ ದಾನವನ ಪಿಡಿದು
ಜಕ್ಕುಲಿಸುತಿರೆ ನೆರದ ಹುಗ್ಗಿಗ
ರೆಕ್ಕ ತುಳದಲಿ ಹಾಯಿದರ ವದಿರು
ರಕ್ಕಸನನಸುರಾರಿ ಪ್ರಾಣವ ತೆಗೆಯಲನುಮಗೈದ ॥

ಕವಿ ರೌದ್ರರಸವನ್ನು ಎಷ್ಟು ಲೀಲಾಜಾಲವಾಗಿ ನಿರೂಪಿಸಬಲ್ಲನೋ ಅಷ್ಟೇ ಸಮರ್ಥವಾಗಿ ಶಾಂತಿರಸವನ್ನು ನಿರೂಪಣೆ ಮಾಡಬಲ್ಲನು. ಪ್ರಹ್ಲಾದನು ತನ್ನ ಆರಾಧ್ಯ ದೈವ ನರಹರಿಯನ್ನು ಕುರಿತು ಪ್ರಾರ್ಥಿಸುವ ಪದ್ಯಗಳಲ್ಲಿ ಭಕ್ತಿಯು ಓತಪ್ರೋತವಾಗಿ ಹರಿದಿರುವುದನ್ನು ಕಾಣಬಹುದು.

ಮುರಹರನೆ ಗಿರಿಧರನೆ ದಾನವ
ಹರನೆ ಲಕ್ಷ್ಮೀವರನೆ ಜಗದು
ದ್ಧರನೆ ರಿಪುಸಂಹರನೆ ಭೂಮೀಶ್ವರನೆ ಕರಿವರನೆ
ಉರಗ ಶಯನನೆ ಸರಸಿಜಾಕ್ಷಕ
ಹರಿಯೆ ದುರಿತಾರಿಯೆ ತ್ರಿವಿಕ್ರಮ
ನರಹರಿಯೆ ಮೈದೋಱು ಕೈದೋಱಸುರನೊಡನೆಂದ

ಎಚ್. ವಿ. ರಾಮಚಂದ್ರರಾವ್

**ಶರಣ–ಸರಣಿ**

ಶೈವೇತರರಾಗಿದ್ದೂ ವೀರಶೈವ ಧರ್ಮ–ಸಾಹಿತ್ಯಗಳಲ್ಲಿ ಆಸಕ್ತಿ ತಳೆದು ಆಳವಾದ ಅಧ್ಯಯನ ನಡೆಸಿದ ಎಂ. ಆರ್. ಶ್ರೀನಿವಾಸಮೂರ್ತಿ ಅವರದು ವೈಶಿಷ್ಟ್ಯಪೂರ್ಣ ವ್ಯಕ್ತಿತ್ವ. ಮಾಧ್ವ ಬ್ರಾಹ್ಮಣರಾದರೂ ವೀರಶೈವ ಧರ್ಮದ ಬಗ್ಗೆ ಅಭಿಮಾನ ತಳೆದು ಅಭ್ಯಸಿಸಿದರು. ಮಾತೃಭಾಷೆ ತೆಲುಗಾದರೂ ಕನ್ನಡದಲ್ಲಿ ಬರೆದರು. ಕಥೆ, ಪದ್ಯ, ನಾಟಕ, ತತ್ವ, ಇತಿಹಾಸಶೋಧನೆ ಮುಂತಾದಸಾಹಿತ್ಯ ಪ್ರಕಾರಗಳಲ್ಲಿ ದುಡಿದರೂ ಅವರ ವಿಶೇಷ ಒಲವು ವೀರಶೈವ ಸಾಹಿತ್ಯದ ಕಡೆಗೆನ್ನುವುದರಲ್ಲಿ ಎರಡು ಮಾತಿಲ್ಲ. ಎಂ. ಆರ್.ಶ್ರೀ ಅವರ ಶೂನ್ಯ ಸಂಪಾದನೆಗಳು, ವೀರಶೈವ ಪುರಾಣಗಳು–ಮುಂತಾದ ಲೇಖನಗಳು, ವಚನ ಧರ್ಮಸಾರ, ಭಕ್ತಿ ಭಂಡಾರಿ ಬಸವಣ್ಣ ಮುಂತಾದ ಕೃತಿಗಳು, ವಿದ್ವತ್ಪೂರ್ಣ ಭಾಷಣಗಳ ಮಧ್ಯೆ ಹೊರಬೀಳುತ್ತಿದ್ದ ಸಾವಿರಾರು ವಚನಗಳೇ ಅದಕ್ಕೆ ಸಾಕ್ಷಿ.

ಶರಣ ಸಾಹಿತ್ಯ, ವೀರಶೈವ ಸಾಹಿತ್ಯದ ಬಗ್ಗೆ, ಕವಿವಚನಕಾರರ ಬಗ್ಗೆ ಅಭಿಮಾನ ವಿತ್ತೆಂದ ಮಾತ್ರಕ್ಕೆ ಕೃತಿ ತುಲನೆಯಲ್ಲಿ ಔದಾರ್ಯವಿತ್ತೆಂದಲ್ಲ. ಕೆಲವು ಬಾರಿ ಹಾಗೆನ್ನಿಸಿ

---

ಪ್ರ : ಪ್ರಶಾಂತಿ ಪ್ರಕಾಶನ, 2ನೇ ಮೈನ್, 8ನೇ ಕ್ರಾಸ್, ಮೈಸೂರು–20.
ಪುಟಗಳು 116 ಬೆಲೆ : ರೂ. 89, ಉತ್ತಮ ಪ್ರತಿ ರೂ. 80. (ಪ್ರ. ಮು. 1996)

ದರೂ ಬಹಳಷ್ಟು ಕಡೆ ಅವರ ವಿಮರ್ಶೆ ನೇರವಾಗಿದೆ. ನಾನಾರೀತಿಯಲ್ಲಿ ಕೃತಿಗಳನ್ನು ನಿಕಷಕ್ಕೊಡ್ಡಿದ್ದಾರೆ. ಸಂಶೋಧನೆಗಳನ್ನು ನಡೆಸಿದ್ದಾರೆ. ವೀರಶೈವ ಸಾಹಿತ್ಯ, ವಚನ ಸಾಹಿತ್ಯದ ಬಗ್ಗೆ ಇವರ ಸಂಶೋಧನೆಗಳನ್ನು ಮಠಮಾನ್ಯಗಳೂ ಪಂಡಿತ ಮಂಡಳಿಯೂ ಏಕರೀತಿಯಿಂದ ಒಪ್ಪಿ ಸ್ವೀಕರಿಸಿರುವುದು ಇವರ ಪಾಂಡಿತ್ಯವನ್ನು ವಿಮರ್ಶಾಶಕ್ತಿಯನ್ನು ತೋರುತ್ತವೆ. ಎಂ.ಆರ್.ಶ್ರೀಯವರ ಹಲವು ಕೃತಿಗಳು ಪ್ರಕಟವಾಗಿದ್ದರೂ ಅಪ್ರಕಟಿತ ಸಾಹಿತ್ಯವೂ ಸಾಕಷ್ಟಿದೆಯೆನ್ನಲಾಗಿದೆ.

ಡಾ|| ನಗುವನಹಳ್ಳಿ ರತ್ನ ಅವರದೂ ಕನ್ನಡ ಸಾಹಿತ್ಯ ಸಂಪಾದನಾಕ್ಷೇತ್ರದಲ್ಲಿ ಇತ್ತೀಚಿನ ದಶಕಗಳಲ್ಲಿ ಆಗಾಗ್ಗೆ ಕೇಳಿ ಬರುತ್ತಿರುವ ಹೆಸರು. ಹತ್ತಕ್ಕೂ ಹೆಚ್ಚು ಕೃತಿಗಳನ್ನು ಬೇರೆ ಬೇರೆ ಕ್ಷೇತ್ರಗಳಲ್ಲಿ ರಚಿಸಿದ ಹಿರಿಮೆ ಅವರದು. ಮಕ್ಕಳ ಪುಟಾಣಿ ಪ್ರಾಸಗಳಿಂದ ಚತುರಾರ್ಯರ ಪ್ರಬಂಧ'ದವರೆಗೆ, 'ಜಾನಪದ ಜೀವಾಳ'ದಿಂದ 'ವಿರಕ್ತರ ಕಾವ್ಯ'ದವರೆಗೆ ತುಡಿಯಬಲ್ಲ ಚೈತನ್ಯಶಾಲಿ ಮನಸ್ಸು. ತಮ್ಮ ಪಿ. ಹೆಚ್ ಡಿ. ಮಹಾ ಪ್ರಬಂಧಕ್ಕಾಗಿ 'ಎಂ.ಆರ್.ಶ್ರೀ ಬದುಕು-ಬರಹ' ಎಂಬ ಅಧ್ಯಯನ ವಿಷಯವನ್ನು ಆಯ್ಕೆ ಮಾಡಿಕೊಂಡ ಶ್ರೀಮತಿ ರತ್ನ ಅವರ ಆ ಕೃತಿ ಎಂ. ಆರ್. ಶ್ರೀಯವರನ್ನು ಕುರಿತಾದ ಸಮಗ್ರ ಅಧ್ಯಯನವಾಗಿದ್ದು ಮೌಲಿಕ ಕೃತಿಯಾಗಿದೆ. ಹಾಗೆ ಅಧ್ಯಯನ ನಡೆಸುವಾಗ ಎಂ.ಆರ್.ಶ್ರೀಯವರ ಮನೆಯವರ ಬಳಿ ಸಿಕ್ಕಿದ ಹಲವಾರು ಹಸ್ತಪ್ರತಿಗಳನ್ನು ಪರಿಶೀಲಿಸಿ ಆಯ್ಕೆ ಮಾಡಿಕೊಂಡ ಲೇಖನಗಳ ಮೊತ್ತ ಈ 'ಶರಣ-ಸರಣಿ' ಎಂದಿದ್ದಾರೆ.

ಹಿನ್ನುಡಿಯಲ್ಲಿ ಶ್ರೀ ಸಿ. ಪಿ.ಕೆ.ಯವರೆಂದಂತೆ ಇಲ್ಲಿನ ಒಂಬತ್ತು ಲೇಖನಗಳನ್ನು ಎರಡು ವಿಭಾಗಗಳಾಗಿಸಬಹುದು. ಅಲ್ಲಮ ಪ್ರಭು, ಅಂಬಿಗರ ಚೌಡಯ್ಯ, ದೇವರ ದಾಸಿಮಯ್ಯ, ವಚನ ಕಾರ್ತಿಯರು, ಸಿದ್ಧರಾಮ, ಚೆನ್ನ ಬಸವಣ್ಣನ ಬಗೆಗಿನ ಲೇಖನಗಳು ಒಂದೆಡೆ ನಿಂತರೆ ಸಿದ್ಧ ನಂಜೇಶ್ವರ, ಚೆನ್ನ ಬಸವಾಂಕ, ನಿಜಗುಣ ಶಿವಯೋಗಿ, ವೀರಭದ್ರರಾಜ ಮುಂತಾದ ವೀರಶೈವ ಕವಿಗಳನ್ನು ಕುರಿತಾದವು ಮತ್ತೊಂದೆಡೆ ನಿಲ್ಲುತ್ತವೆ. ಶರಣರ ಅಥವಾ ಕವಿಯ ಬದುಕು-ವ್ಯಕ್ತಿತ್ವ, ಕೃತಿಗಳನ್ನು ಅವರ ಸಾಹಿತ್ಯದ ಮೂಲಕವೇ ವಿಮರ್ಶಾತ್ಮಕವಾಗಿ ಪರಿಚಯಿಸಿರುವುದು ಈ ಲೇಖನಗಳ ವೈಶಿಷ್ಟ್ಯ.

ಜ್ಞಾನಕ್ಕೆ ಚೆನ್ನಬಸವಣ್ಣ, ವೈರಾಗ್ಯಕ್ಕೆ ಅಲ್ಲಮಪ್ರಭು, ಕರ್ಮಯೋಗಕ್ಕೆ ಸಿದ್ಧರಾಮ 'ಶರಣಸತಿ ಲಿಂಗಪತಿ' ಭಾವಕ್ಕೆ ಅಕ್ಕಮಹಾದೇವಿಯನ್ನು ನೆಲೆಯಾಗಿಸಿ ಅವರಗುಣವೈಶಿಷ್ಟ್ಯಗಳನ್ನು ಎತ್ತಿ ಹಿಡಿದಿರುವಂತೆ ಆಯಾ ಕವಿಗಳ ಗುಣದೋಷಗಳನ್ನೂ ಇಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

ಚೆನ್ನಬಸವಣ್ಣನಲ್ಲಿ ದೈನ್ಯಕ್ಕಿಂತ ಆತ್ಮವಿಶ್ವಾಸ ಹೆಚ್ಚು. ಅವರ ವಾಕ್ಯಗಳಲ್ಲಿ ಶಾಸ್ತ್ರಜ್ಞಾನ ಚೆನ್ನಾಗಿ ಕಂಡುಬರುತ್ತದೆ. ರಸ ಭಾವಗಳು ಕಡಿಮೆ. ಬಸವೇಶ್ವರರ

ವಚನಗಳಂತೆ ಹೃದ್ಯವಾಗಿಲ್ಲ. ಆದರೆ ಮಾತಿನಬೆಡಗು, ಶಬ್ದಾಲಂಕಾರದ ವೈಚಿತ್ರ್ಯ, ಬುದ್ಧಿ ಚಮತ್ಕಾರದ ಪ್ರದರ್ಶನ ವಾದಸಾಮರ್ಥ್ಯ ಮತ್ತು ಆತ್ಮವಿಶ್ವಾಸದ ಧೋರಣೆ ಅವರ ವಚನಗಳಲ್ಲಿ ಚೆನ್ನಾಗಿ ಕಂಡುಬರುತ್ತವೆ. ಕಠಿಣ ವಿಷಯಗಳನ್ನು ಸುಲಭದಲ್ಲಿ ಸೂತ್ರರೂಪದಲ್ಲಿ ಹೇಳಬಲ್ಲ ಬುದ್ಧಿಶಕ್ತಿ ಅವರದು ಎಂಬ ಮಾತುಗಳಲ್ಲಿ ಚೆನ್ನಬಸವಣ್ಣನ ಇಡೀ ವ್ಯಕ್ತಿತ್ವವೇ ಅಡಗಿದೆ.

ಮಹಾದೇವಿಯಕ್ಕನ ಪುರಾಣ ಬರೆದ ಚೆನ್ನಬಸವಾಂಕನನ್ನು ಸಂದರ್ಭಾನುಸಾರ ಛಂದೋವೈವಿಧ್ಯವನ್ನು ತಂದುಕೊಂಡು ಕಾವ್ಯಕ್ಕೆ ಕಳೆಕಟ್ಟಿಸುತ್ತಾನೆ. ನವೀನ ರೀತಿಯಲ್ಲಿ ಸನ್ನಿವೇಶಗಳನ್ನು ಬಳಸಿ ವರ್ಣನೆಗಳನ್ನು ಮಾಡಿ ಕಾವ್ಯವನ್ನು ರಂಜಕವಾಗಿ ಮಾಡಿದ್ದಾನೆ. ಕವಿ ಚತುರನೂ ರಸಿಕನೂ ಆಗಿದ್ದಾನೆ" ಎಂದಂತೆಯೇ ಅದು ಅತಿಯಾದಾಗ "ಮಲ್ಲಿನಾಥಾರ್ಯನ ಪ್ರಕರಣವನ್ನೂ ಚಂದ್ರಿನಿ ಮೊದಲಾದವರ ಉಪಕಥೆಗಳನ್ನೂ ಹೇಳದೆ ಅಡಕವಾಗಿ ಕೃತಿಯನ್ನು ರಚಿಸಿದ್ದರೆ ಚೆನ್ನಾಗಿರುತ್ತಿತ್ತು" ಎಂದೂ ಟೀಕಿಸಿದ್ದಾರೆ.

ನಿಜಗುಣ ಶಿವಯೋಗಿ–ಲೇಖನ ಅವರ ಬರಹ ಬದುಕನ್ನು ವಿಶದವಾಗಿ ಪರಿಚಯಿಸುತ್ತದೆ. "ಕನ್ನಡ ನುಡಿಯ ಸೊಬಗು, ಅದರಲ್ಲಿ ಸೊಗಸಾದ ಭಾವಗಳನ್ನು ಅಡಗಿಸುವ ಬೆಡಗು ಮತ್ತು ಸುಲಭ ಶೈಲಿ–ಇವುಗಳನ್ನು ನಿಜಗುಣಶಿವಯೋಗಿಯಲ್ಲಿ ಕಾಣಬಹುದು" ಎಂಬ ಅಭಿಪ್ರಾಯ ಎಲ್ಲರೂ ಒಪ್ಪತಕ್ಕದ್ದಾಗಿದೆ.

ಸಿ. ಪಿ. ಕೆ. ಅವರು ಹೇಳಿರುವಂತೆ ಇಲ್ಲಿನ ಲೇಖನಗಳು ಎಂ. ಆರ್. ಶ್ರೀ ಅವರ ಆಳವಾದ ಅಧ್ಯಯನ, ವಿಶ್ಲೇಷಣ ಸಾಮರ್ಥ್ಯ ಹಾಗೂ ಮೌಲ್ಯಮಾಪನ ಕೌಶಲ್ಯಕ್ಕೆ ಕನ್ನಡಿ ಹಿಡಿದಿವೆ. ಅಲ್ಲಲ್ಲಿ ಕಾಣುವ ಅಚ್ಚಿನ ದೋಷಗಳಿಲ್ಲದಿದ್ದರೆ ಕೃತಿಯ ಮೌಲ್ಯ ಇನ್ನೂ ಹೆಚ್ಚುತ್ತಿತ್ತು. ಆದರೂ ಎಲ್ಲೊ ಮರೆಯಲ್ಲಿ ಸೇರಿಹೋಗಿದ್ದ ಈ ಲೇಖನಗಳನು ಬೆಳಕಿಗೆ ತಂದ ಡಾ|| ನಗುವನಹಳ್ಳಿ ರತ್ನ ಅವರನ್ನು 'ಶರಣಸರಣಿ' ಲೇಖನ ಸಂಪುಟಕ್ಕಾಗಿ ಅಭಿನಂದಿಸಲೇ ಬೇಕು.

ಸರ್ವಮಂಗಳಾ

# ವಸ್ತು ಸಂಗ್ರಹ

---

## ವಿಶ್ವ ಸಂಸ್ಕೃತ ಸಮ್ಮೇಳನ ಮತ್ತು ವಸ್ತು ಪ್ರದರ್ಶನ

ಬೆಂಗಳೂರಿನ ಆರ್. ಟಿ. ನಗರದಲ್ಲಿರುವ ತರಳಬಾಳು ಕೇಂದ್ರದ ಎದುರಿನಲ್ಲಿರುವ ಮೈದಾನದಲ್ಲಿ ದಿನಾಂಕ ೩-೧-೧೯೯೭ ರಿಂದ ೯-೧-೧೯೯೭ ರ ವರೆಗೆ ವಿಶ್ವ ಸಂಸ್ಕೃತ ಸಮ್ಮೇಳನ ಅತ್ಯಂತ ಪ್ರಭಾವಿಯಾಗಿ ನೆರವೇರಿತು.

ಇದರ ಉದ್ಘಾಟನೆ ವಿಧಾನ ಸೌಧದ ಬ್ಯಾಂಕ್ವೆಟ್ ಸಭಾಂಗಣದಲ್ಲಿ ಭಾರತದ ಪ್ರಧಾನಿ ಎಚ್. ಡಿ. ದೇವೇಗೌಡರಿಂದಾಯಿತು. ಅಲ್ಲಿ ವಿವಿಧ ಗೋಷ್ಠಿಗಳಲ್ಲಿ ಪ್ರತಿಪಾದಿತವಾದ ಕೆಲವು ಮುಖ್ಯಾಂಶಗಳಿವು—

"ಗ್ರೀಕ್, ಲ್ಯಾಟಿನ್ ಭಾಷೆಗಳಂತೆ ಸಂಸ್ಕೃತವು ಮೃತಭಾಷೆ ಎನ್ನುವುದು ಅಜ್ಞಾನದ ಪರಾಕಾಷ್ಠೆ. ಸಂಸ್ಕೃತ ಶಬ್ದಗಳ ಬಳಕೆಯಿಲ್ಲದ ಭಾರತೀಯ ಭಾಷೆ ಯಾವುದೂ ಇಲ್ಲ. ಸಂಸ್ಕೃತವನ್ನು ಮಾತನಾಡುವವರು ಈಗಲೂ ಇದ್ದಾರೆ. ಅದನ್ನು ಮೃತಭಾಷೆಯೆಂದು ನಂಬಿದವರು ಜ್ಞಾನವಂಚಕರು. ಭಾರತದ ಉಜ್ವಲ ಭವಿಷ್ಯದ ದೃಷ್ಟಿಯಿಂದ ಸಂಸ್ಕೃತ ಜ್ಞಾನಭಂಡಾರ ಎಲ್ಲರಿಗೂ ದೊರೆಯುವಂತಾಗಬೇಕು. ಸಂಸ್ಕೃತವನ್ನು ಜನಪ್ರಿಯಗೊಳಿಸಲು ಎಲ್ಲ ಕಡೆ ಕ್ರಮಕೈಗೊಳ್ಳಬೇಕು. ಸಂಸ್ಕೃತಕ್ಕೆ ತುಂಬಾ ಸ್ಪಷ್ಟವಾಗಿ ಮತ್ತು ನಿಖರವಾಗಿ ಸಂವಹನ ಮಾಡುವ ಶಕ್ತಿಯಿದೆ. ಜಗತ್ತಿಗೇ ಬೆಳಕು ಕೊಟ್ಟ ಭಾಷೆ ಸಂಸ್ಕೃತ. ಸಂಸ್ಕೃತ-ಕನ್ನಡಗಳ ಸಂಬಂಧ ತಾಯಿ ಮತ್ತು ಮಗಳು ಇದ್ದ ಹಾಗೆ. ಆದರೆ ಈಚೆಗೆ ಈ ಎರಡೂ ಭಾಷೆಗಳ ಸಂಬಂಧ ಅತ್ತೆ ಸೊಸೆಯಂತಾಗಿದೆ. ಇವುಗಳ ಸಂಬಂಧ ಹಿಂದಿನಂತೆ ಮುಂದುವರಿಯಬೇಕು."

ಈ ಸಮ್ಮೇಳನದಲ್ಲಿ ಹೆಚ್ಚಾಗಿ ಚರ್ಚೆಗೊಳಗಾದ ವಿಷಯ ಪ್ರಾಚೀನ ಹಸ್ತಪ್ರತಿ ಸಂಗ್ರಹ, ಸಂರಕ್ಷಣೆ ಮತ್ತು ಪ್ರಕಟನೆಯನ್ನು ಕುರಿತದ್ದಾಗಿತ್ತು. ದೇಶ ವಿದೇಶಗಳಲ್ಲಿ ಸಂರಕ್ಷಣೆಗೊಂಡಿರುವ ಹಲವಾರು ಅಮೂಲ್ಯ ಹಸ್ತ ಪ್ರತಿಗಳ ವಿಚಾರವನ್ನು ವಿಶೇಷವಾಗಿ ವಿದೇಶಿ ವಿದ್ವಾಂಸರು ಉಲ್ಲೇಖಿಸುತ್ತ ಈ ಕಾರ್ಯ ಇನ್ನೂ ವ್ಯವಸ್ಥಿತವಾಗಿ ವೈಜ್ಞಾನಿಕವಾಗಿ ಆಗ ಬೇಕಾದುದನ್ನು ಒತ್ತಿ ಹೇಳಿದರು.

ಸನ್ಮಾನ : ಮಿಥಿಕ್ ಸೊಸೈಟಿ ವಿದ್ವತ್ ಕ್ಷೇತ್ರದಲ್ಲಿ ನುರಿತ ಸಾಧನೆ ಮಾಡಿರುವ ಗಣ್ಯರಿಗೆ ಸನ್ಮಾನಿಸುವ ಸತ್ಸಂಪ್ರದಾಯ ಹೊಂದಿದ್ದು ಅದರಂತೆ 23-3-97 ರಂದು ಸಂಶೋಧಕರಾದ ಡಾ || ಎಲ್. ಬಸವರಾಜು, ಡಾ|| ಶ್ರೀನಿವಾಸ ಹಾವನೂರ್

ಡಾ|| ಬಿ. ಆರ್. ಗೋಪಾಲ್ ಮತ್ತು ಡಾ|| ಎಂ. ಚಿದಾನಂದ ಮೂರ್ತಿ ಅವರಿಗೆ ವಿದ್ವತ್ ಸನ್ಮಾನವನ್ನು ಮಾಡಿತು.

ಜನ್ಮ ಶತಾಬ್ದಿ ಸ್ಮರಣೆ : ಈ ಸಾಲಿನಲ್ಲಿ ಕನ್ನಡದ ಪ್ರಸಿದ್ಧ ಸಾಹಿತಿಗಳಾದ ದೇವುಡು ನರಸಿಂಹಾಶಾಸ್ತ್ರಿ, ನಾ. ಕಸ್ತೂರಿ, ದ. ರಾ. ಬೇಂದ್ರೆ ಇವರುಗಳ ಶತಾಬ್ದಿ ಸ್ಮರಣೆಯ ಕಾರ್ಯಕ್ರಮಗಳು ಆದವು. ದೇವುಡು ಪ್ರತಿಷ್ಠಾನ ದೇವುಡು ಶತಾಬ್ದಿ ಸ್ಮರಣೆಯ ಸಮಾರೋಪವನ್ನು 16–3–97ರಂದು ನಡೆಸಿದರೆ ಕನ್ನಡ ಸಾಹಿತ್ಯ ಪರಿಷತ್ತು ನಾ. ಕಸ್ತೂರಿ ಸ್ಮರಣೆಯನ್ನು ಕಾರ್ಯಕ್ರಮ 1 ಎಂದು 20–3–97ರಲ್ಲಿ ನಡೆಸಿತು. ಬೇಂದ್ರೆ ಶತಾಬ್ದಿ ಸ್ಮರಣೆಯನ್ನೂ ಆದರ್ಶ ಭಾರತೀಯ ಸಾಂಸ್ಕೃತಿಕ ಸಂಸತ್ 12.-4–97ರಂದು ನಡೆಸಿತು.

ಈ ಮೂವರು ಮಹನೀಯರ ಶತಾಬ್ದಿ ಸ್ಮರಣೆಗಳು ಆಗಬೇಕಾದ ರೀತಿಯಲ್ಲಿ ಆಗಲಿಲ್ಲ ಎಂಬ ಕೊರಗು ಹಲವರದ್ದು.

ಸಿರಿಭೂವಲಯದ ಜಯಾಖ್ಯಾನ ಭಾರತ ಭಗವದ್ಗೀತಾದ ಬಿಡುಗಡೆ : ಬಹಳ ದಿನಗಳಿಂದ ಗೋಪ್ಯವಾಗಿರುವ ಈವರೆಗೂ ಈ ಗ್ರಂಥದ ಪೂರ್ಣ ಪಠ್ಯ ಏನು ಎಂಬುದರ ಬಗೆಗೆ ಅಜ್ಞಾತವಾಗಿರುವ ಸಿರಿಭೂವಲಯದಂತಹ ಅಪರೂಪದ ಅಪೂರ್ವವಾದ ಕನ್ನಡ ಅಪ್ರಕಟಿತ ಕೃತಿಯೊಂದರಿಂದ ಜಯಾಖ್ಯಾನ ಭಾರತ ಮತ್ತು ಭಗವದ್ಗೀತಾ ಕೃತಿಗಳನ್ನು ಹೆಕ್ಕಿ ಸಂಶೋಧಕರಾದ ಕಟ್ಟೆ ನಾಗರಾಜ್ ಅವರು ಸಿದ್ಧಪಡಿಸಿದ್ದಾರೆ. ಈ ಉದ್ದೇಶಕ್ಕಾಗಿಯೇ ಸ್ಥಾಪಿಸಿರುವ ಅನಂತರಂಗ ಪ್ರತಿಷ್ಠಾನದ ಮೂಲಕ 23. 4. 97ರಂದು ಈ ಕೃತಿ ಬಿಡುಗಡೆಯನ್ನು ನ್ಯಾ. ನಿಟ್ಟೂರು ಶ್ರೀನಿವಾಸ ರಾಯರು ಮಾಡಿದ್ದಾರೆ. ಈ ಗ್ರಂಥದ ಮೂಲ ಹಸ್ತ ಪ್ರತಿಯನ್ನು ಪಡೆಯುವುದರೊಂದಿಗೇ ಇದರಲ್ಲಿರುವ ಎಲ್ಲ ಗ್ರಂಥಗಳನ್ನೂ ಸಂಶೋಧಿಸಿ ಪ್ರಕಟಿಸುವ ಕಾರ್ಯ ಕನ್ನಡ ವಿದ್ವತ್ ಲೋಕದಲ್ಲಿ ಸಮಾಲೋಪಾದಿಯಲ್ಲಿ ಕಾಯುತ್ತದೆ.

ಜ್ಞಾನಪೀಠ ಪ್ರಶಸ್ತಿ ವಿಜೇತರ ಅಂಚೆಚೀಟಿ : ಕನ್ನಡಿಗರ ಅಂಚೆಚೀಟಿಗಳು ಭಾರತದ ಮಟ್ಟದಲ್ಲಿ ಬಹಳ ಕಡಮೆ. ಬಿ. ಎಂ. ಶ್ರೀ. ಶತಾಬ್ದಿ ಸಂದರ್ಭದಲ್ಲಿ ನಮ್ಮ ಪ್ರಯತ್ನ ಪ್ರಥಮವಾಗಿ ಅಂಚೆಕವರ್ ಹೊರಡಿಸುವಷ್ಟಕ್ಕೆ ಸಾಕಾಯಿತು. ದೇವೇಗೌಡರು ಪ್ರಧಾನಿಯಾಗಿದ್ದ ಸಂದರ್ಭವನ್ನು ಬಳಸಿಕೊಂಡು ಈ ಪ್ರಯತ್ನ ಮಾಡಿರುವುದು ಸ್ತುತ್ಯವಾಗಿದೆ. ಪರಿಷತ್‌ನಲ್ಲಿ 28. 3. 97ರಂದು ಅಂಚೆ ಮಹಾನಿರ್ದೇಶಕರ ಮೂಲಕ ಗತಿಸಿರುವ ನಾಲ್ವರು ಜ್ಞಾನಪೀಠ ವಿಜೇತರ ಭಾವ ಚಿತ್ರವಿರುವ ಭಾರತ ಸರ್ಕಾರ ಸಿದ್ಧಪಡಿಸಿರುವ ಅಂಚೆಚೀಟಿಯ ಬಿಡುಗಡೆ ಮಾಡಲಾಯಿತು. ●

# ಪ್ರತಿಷ್ಠಾನ ವಾರ್ತೆ

---

1. ಸಾಹಿತ್ಯೋಪಾಸಕರು ಕಾರ್ಯಕ್ರಮ ಮಾಲೆ.

೧. ಎಂ ಎ. ರಾಮಾನುಜ ಅಯ್ಯಂಗಾರ್ ಸಾಹಿತ್ಯ ಸಾಧನೆ :ವಿಚಾರ ಗೋಷ್ಠಿ : ೨೩. ೨. ೯೭ ರಂದು ನಡೆದ ಈ ಕಾರ್ಯಕ್ರಮದಲ್ಲಿ ನಿಟ್ಟೂರು ಶ್ರೀನಿವಾಸ ರಾವ್ ಅವರ ಅಧ್ಯಕ್ಷತೆಯಲ್ಲಿ ಶ್ರೀಮತಿ ಎಂ. ಎ. ಸಿಂಗಮ್ಮ 'ರಾಮಾನುಜ ಅಯ್ಯಂಗಾರ್ಯರ ಜೀವನ-ವ್ಯಕ್ತಿತ್ವ' ಕುರಿತೂ, ಶ್ರೀ ಎಂ. ಆರ್. ನರಸಿಂಹನ್ ಅವರ 'ಸ್ವತಂತ್ರ ಕೃತಿಗಳನ್ನು ಕುರಿತೂ, ಡಾ|| ಎಸ್. ವಿದ್ಯಾಶಂಕರ 'ಗ್ರಂಥ ಸಂಪಾದನೆ'ಯ ಕೊಡುಗೆಯನ್ನು ಕುರಿತೂ ಉಪನ್ಯಾಸಗಳನ್ನು ನೀಡಿದರು.

ಕನ್ನಡ ಗ್ರಂಥ ಸಂಪಾದನ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗಿರುವ ಎಂ. ಎ. ರಾಮಾನುಜ ಅಯ್ಯಂಗಾರ್ಯರು (೧೮೬೩–೧೯೩೭) ಆ ಅವಧಿಯಲ್ಲೇ ಸುಮಾರು ಎಪ್ಪತ್ತಕ್ಕೂ ಹೆಚ್ಚು ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದ್ದರು. ಈ ಮಾಲೆಯಲ್ಲಿ ಇದು ೩೧ನೆಯ ಕಾರ್ಯಕ್ರಮವಾಗಿತ್ತು.

೨. ಎನ್. ಆರ್. ಕರಿಬಸವಶಾಸ್ತ್ರಿಗಳ ಜೀವನ-ಸಾಧನೆ ಕುರಿತು ತುಮಕೂರಿನ ಡಾ || ಬಿ. ನಂಜುಂಡ ಸ್ವಾಮಿ ೨೪.೨.೯೭ರಂದು ನಿಟ್ಟೂರರ ಅಧ್ಯಕ್ಷತೆಯಲ್ಲಿ ಉಪನ್ಯಾಸ ನೀಡಿದರು. ಅದು ೩೨ ನೆಯ ಕಾರ್ಯಕ್ರಮವಾಗಿತ್ತು. ಕರಿಬಸವ ಶಾಸ್ತ್ರಿಗಳು (೧೮೭೨–೧೯೨೩) ಮೈಸೂರು ಸಂಸ್ಥಾನದ ಆಸ್ಥಾನ ವಿದ್ವಾಂಸರಾಗಿ ಹಲವಾರು ಕೃತಿಗಳನ್ನು ಸಂಪಾದಿಸಿದ್ದ ಸ್ಮರಣೀಯ ಸಾಹಿತ್ಯೋಪಾಸಕರು.

೩. ಹಾನಗಲ್ಲ ಕುಮಾರ ಸ್ವಾಮಿಗಳ ಜೀವನ-ಸಾಧನೆ ಕುರಿತು ಮೈಸೂರಿನ ಪ್ರೊ|| ಜಿ. ಎ. ಶಿವಲಿಂಗಯ್ಯನವರು ೨೪–೩–೯೭ರಂದು ಉಪನ್ಯಾಸ ನೀಡಿದರು. ಬಾದಾಮಿಯ ಶಿವಯೋಗ ಮಂದಿರದ ಸಂಸ್ಥಾಪಕರೂ ಹಾನಗಲ್ಲ ಮಠಾಧೀಶರೂ ಕ್ರಾಂತಿಕಾರಿ ಸಮಾಜ ಸುಧಾರಕರೂ ಆಗಿದ್ದ ಸ್ವಾಮಿಗಳು (೧೮೬೭–೧೯೩೦) ಕನ್ನಡ ನಾಡಿನಲ್ಲಿ ವೈಚಾರಿಕ ಜಾಗೃತಿಯನ್ನು ಆ ಕಾಲದಲ್ಲೇ ಬಿತ್ತಿದ ಸಾಹಿತ್ಯೋಪಾಸಕರಾಗಿದ್ದಾರೆ.

2. ಡಾ|| ಶಂ. ಬಾ. ಜೋಶಿ ಶತಮಾನೋತ್ಸವ :

ಶಂಬಾ ಜೋಶಿ ದತ್ತಿನಿಧಿ ಅಂಗವಾಗಿ ಶಂಬಾ ವಿಚಾರ ವೇದಿಕೆಯ ಸಹಯೋಗದಲ್ಲಿ ೫–೧–೯೭ ರಂದು ಈ ಕಾರ್ಯಕ್ರಮವನು ನಡೆಸಲಾಯಿತು. ಪ್ರೊ|| ಎನ್.

ಬಸವಾರಾಧ್ಯರ ಅಧ್ಯಕ್ಷತೆಯಲ್ಲಿ 'ಶಂಬಾ ಕಂಡ ಕರ್ನಾಟಕ' ವಿಷಯದ ಬಗ್ಗೆ ಡಾ|| ಜಿ. ಎಂ ಹೆಗಡೆ 'ಭಾರತೀಯ ಮಾನವ ಸಂಸ್ಕೃತಿ ಅನ್ವೇಷಣೆಗೆ ಶಂಬಾ ಕೊಡುಗೆ' ಬಗ್ಗೆ ಡಾ|| ಜಿ. ಭಾಸ್ಕರಮಯ್ಯ ಅವರು ವಿಶೇಷ ಉಪನ್ಯಾಸಗಳನ್ನು ನೀಡಿದರು.

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಜಿ. ಎಸ್. ಆಮೂರ ಅವರು ವೇದಿಕೆಯು ಪ್ರಕಟಿಸಿರುವ 'ಶಂಬಾಸ್ಮೃತಿ ಗಂಧ' ಪುಸ್ತಕ ಬಿಡುಗಡೆ ಮಾಡಿದರು. ಇದೇ ಸಂದರ್ಭದಲ್ಲಿ ಆ ಮೂವರನ್ನು ಸನ್ಮಾನಿಸಲಾಯಿತು. ಅಭಿನಂದನ ಭಾಷಣ ವನ್ನು ಡಾ|| ಪಿ. ವಿ. ನಾರಾಯಣ ಮಾಡಿದರು. ಶಂಬಾ ಅವರ ಬಂಧುಗಳಾದ ಶ್ರೀಮತಿ ವಿಮಲ ವಿಸ್ಕಲ್‌ಕರ್ ಮತ್ತು ಡಾ|| ಮಧುಕರ ಜೋಶಿ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

3. ಹಸ್ತಪ್ರತಿಶಾಸ್ತ್ರ ತರಗತಿ ಸಮಾರೋಪ :

೯೬ನೇ ಸಾಲಿನ ಹಸ್ತಪ್ರತಿ ಶಾಸ್ತ್ರ ತರಗತಿಯ ಮುಕ್ತಾಯ ಸಮಾರಂಭ ಗೋಖಲೆ ಸಂಸ್ಥೆಯಲ್ಲಿ ನಿಟ್ಟೂರರ ಸಮ್ಮುಖದಲ್ಲಿ ಆತ್ಮೀಯವಾಗಿ ಆಯಿತು. ಶ್ರವಣ ಬೆಳಗೊಳ ಧರ್ಮಸ್ಥಳ, ಮೂಡಬಿದಿರೆ, ಹಸ್ತ ಪ್ರತಿ ಭಂಡಾರಗಳಿಗೆ ವಿದಾರ್ಥಿಗಳು ಭೇಟಿ ನೀಡಿದ್ದ ಶೈಕ್ಷಣಿಕ ಪ್ರವಾಸದ ಮತ್ತು ತರಗತಿಗಳ ಅನುಭವಗಳನ್ನು ವಿದ್ಯಾರ್ಥಿ ಗಳು ಹಂಚಿಕೊಂಡರು.

4. ಸಾವಿತ್ರಮ್ಮ ದತ್ತಿನಿಧಿ ಸಾಹಿತ್ಯ ಪ್ರಶಸ್ತಿ :

೯೫ನೇ ಸಾಲಿನ ಮಕ್ಕಳ ಸಾಹಿತ್ಯ ಪ್ರಶಸ್ತಿ ದಕ್ಷಿಣ ಕನ್ನಡದ ಕಿನ್ನಿಗೋಳಿ ಗಾಯತ್ರಿ ಎಸ್. ಉಡುಪ ಅವರ "ಗೌರಿಯ ಗೊಂಬೆ' ಕೃತಿಗೂ ೯೬ನೇ ಸಾಲಿನ ಮಹಿಳಾ ಸೃಜನೇತರ ಸಾಹಿತ್ಯ ಪ್ರಶಸ್ತಿ ಬೆಂಗಳೂರಿನ ಲತಾಗುತ್ತಿ ಅವರ 'ನಾ ಕಂಡಂತೆ ಅರೇಬಿಯಾ' ಕೃತಿಗೂ ಲಭ್ಯವಾಗಿದೆ.

ಈ ಪ್ರಶಸ್ತಿಯ ಆಯ್ಕೆಗಾಗಿ ನೇಮಿಸಿದ್ದ 1. ಪ್ರೊ|| ಎಸ್. ಶ್ರೀನಿವಾಸನ್ 2. ಪ್ರೊ|| ಡಿ. ಲಿಂಗಯ್ಯ 3. ಪ್ರೊ|| ಚಿ. ಶ್ರೀನಿವಾಸರಾಜು, 4. ಶ್ರೀಮತಿ ವತ್ಸಲಾದೇವಿ. 5. ವಸಂತಕುಮಾರಿ ಮತ್ತು 6 ಪುಷ್ಪಲತಾ ಕಟ್ಟಿ, ಅವರುಗಳನ್ನೊಳ ಗೊಂಡ ತೀರ್ಪು ಸಮಿತಿ ಈ ಆಯ್ಕೆಯನ್ನು ಮಾಡಿದೆ. ಈ ಎರಡೂ ಪ್ರಶಸ್ತಿಗಳಿಗೆ ನಮ್ಮ ಕರೆಯನ್ನು ಸ್ವೀಕರಿಸಿ ಕ್ರಮವಾಗಿ 20 ಮತ್ತು 14 ಕೃತಿಗಳು ಬಂದಿದ್ದವು. ಸದ್ಯದಲ್ಲೆ ನಡೆಸುವ ಕಾರ್ಯಕ್ರಮದಲ್ಲಿ ಈ ಪ್ರಶಸ್ತಿಗಳನ್ನು ವಿತರಿಸಲಾಗುವುದು.

5. ನೂತನ ದತ್ತಿಗಳ ಸ್ಥಾಪನೆ

೧. ಅನಂತರಂಗ ಪ್ರತಿಷ್ಠಾನ ದತ್ತಿ ನಿಧಿ : ಪ್ರತಿಷ್ಠಾನದ ಶ್ರೀ ಕೆ. ನಾಗ ರಾಜ್ ಅವರು ಸಂಶೋಧನ ಕ್ಷೇತ್ರದಲ್ಲಿ ಹೊಸ ವಿಚಾರ ಮಾಡಿಸುವ ಉಪನ್ಯಾಸ ಅಥವಾ

ಲೇಖನವನ್ನು ಪುರಸ್ಕರಿಸುವ ಉದ್ದೇಶದಿಂದ 15,000ರೂಗಳ ದತ್ತಿನಿಧಿಯನ್ನು ಸ್ಥಾಪಿಸಿದ್ದಾರೆ.

೨. ಆ.ನೆ. ಉಪಾಧ್ಯೆ ಮತ್ತು ಡಿ. ಎಲ್. ನರಸಿಂಹಾಚಾರ್ ದತ್ತಿಗಳು: ಈ ಇಬ್ಬರು ಮಹನೀಯರೂ ಕನ್ನಡ ಸಾಹಿತ್ಯಲೋಕದ ದಿಗ್ಗಜಗಳು. ಇವರ ಹೆಸರಿನಲ್ಲಿ ಇವರುಗಳಿಗೆ ಪ್ರಿಯವಾಗಿದ್ದ ಸಾಹಿತ್ಯ ಕ್ಷೇತ್ರದಲ್ಲಿ ಪ್ರತಿವರ್ಷ ಉಪನ್ಯಾಸಗಳನ್ನು ನಡೆಸುವುದರ ಮೂಲಕ ಇವರುಗಳನ್ನು ಸ್ಮರಿಸುವ ಮಹದಾಶೆಯಿಂದ ಅನಂತರಂಗ ಪ್ರತಿಷ್ಠಾನದ ಶ್ರೀ ನಾಗರಾಜ್ ಅವರೇ ಪ್ರಾರಂಭಿಸಿ ಕೇವಣಿಯಾಗಿ ತಲಾ 5,000 ರೂ.ಗಳನ್ನು ನೀಡಿ ದತ್ತಿ ಸ್ಥಾಪಿಸಿದ್ದಾರೆ. ಇವರ ಶಿಷ್ಯರು ಅಭಿಮಾನಿಗಳು ಸಾಕಷ್ಟು ಜನರಿದ್ದು ಅವರಿಂದ ಉಳಿದ ಹಣವನ್ನು ಸಂಗ್ರಹಿಸಿ ಆದಷ್ಟು ಬೇಗ ದತ್ತಿ ಕಾರ್ಯಕ್ರಮ ನಡೆಸಲು ಸೂಚಿಸಿದ್ದಾರೆ.

೩. ಸೋಸಲೆ ಅಯ್ಯಾಶಾಸ್ತ್ರಿ ಸ್ಮಾರಕದತ್ತಿನಿಧಿ :ಶ್ರೀ ಎಸ್. ಆರ್. ಶೇಷಾದ್ರಿ ಅವರು ಈ ಉದ್ದೇಶಕ್ಕಾಗಿ 1,000 ರೂಗಳನ್ನು ದತ್ತಿ ನೀಡಿದ್ದಾರೆ. ಇದೇ ದತ್ತಿಗೆ ಈವರೆಗೆ 2,000 ರೂಗಳು ಸಂಗ್ರಹವಾಗಿದ್ದು ಶಾಸ್ತ್ರಿಗಳ ಬಂಧುಗಳನ್ನು ಮತ್ತು ಅಭಿಮಾನಿಗಳನ್ನು ಸಂಪರ್ಕಿಸಿ ಕನಿಷ್ಠ 10,000 ರೂಗಳನ್ನು ಕೂಡಿಸಲು ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯನವರು ಪ್ರಯತ್ನಿಸುತ್ತಿದ್ದಾರೆ.

೪. ಟಿ. ಎನ್. ಮಹದೇವಯ್ಯ ಸ್ಮಾರಕ ದತ್ತಿ ನಿಧಿ : ಈ ನಿಧಿಗೆ ಹಿಂದೆ ಸಂಗ್ರಹವಾಗಿದ್ದ 3,350.00 ರೂಗಳ ಜೊತೆಗೆ ಪ್ರೊ|| ಬಸವಾರಾಧ್ಯರು 150.00 ರೂಗಳನ್ನು (ಒಟ್ಟು 1000) ನೀಡಿದ್ದಾರೆ. ತುಮಕೂರಿನ ಶ್ರೀ ಬಿ. ವೀರಭದ್ರಯ್ಯ ಅವರು ಈ ದತ್ತಿಯನ್ನುಕೂಡಿಸಲುಪ್ರಯತ್ನಿಸುತ್ತಿದ್ದಾರೆ.

ಮಾನ್ಯ ಅಭಿಮಾನಿಗಳು ಆಸಕ್ತರು ಉದಾರವಾಗಿ ಸಹಾಯ ಮಾಡಿ ಈ ಕೈಂಕರ್ಯದಲ್ಲಿ ಪಾಲುದಾರರಾಗಬೇಕಾಗಿ ವಿನಂತಿ. ಇಂದಿನ ಕಾಲದಲ್ಲಿ ಕೇವಲ ಉಪನ್ಯಾಸ ನಡೆಸುವ ಒಂದು ದತ್ತಿಗೆ ಕನಿಷ್ಠ 25 ಸಾವಿರ ರೂಗಳಾದರೂ ಬೇಕಾಗುತ್ತದೆ. ಕನಿಷ್ಠ 15 ಸಾವಿರ ರೂ. ಗಳಾದರೂ ಕೂಡಿದರೆ ಹೇಗೋ ನಡೆಸಬಹುದಾಗಿದೆ. ●

# ಅಭಿನಂದನೆ

---

## 1. ಗೌರೀಶ ಕಾಯ್ಕಿಣಿ ಪ್ರಶಸ್ತಿ

೧೯೯೬ನೆಯ ವರ್ಷದ ‘ಗೌರೀಶ ಕಾಯ್ಕಿಣಿ ಪ್ರತಿಷ್ಠಾನ ಪ್ರಶಸ್ತಿ’ ಯನ್ನು ಕನ್ನಡದ ಪ್ರಸಿದ್ಧ ಕವಿ ಹಾಗೂ ಮುಂಬಯಿ ಕನ್ನಡಿಗರಾದ ಶ್ರೀ ಅರವಿಂದ ನಾಡಕರ್ಣಿ ಅವರಿಗೆ ನೀಡಲಾಗಿದೆ. ಇವರು ಹತ್ತು ಕವನ ಸಂಕಲನಗಳನ್ನೂ ‘ಅರ್ಹತೆ’ ಎಂಬ ವಿಮರ್ಶಲೇಖನ ಸಂಗ್ರಹವನ್ನೂ ಪ್ರಕಟಿಸಿದ್ದಾರೆ. ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಮತ್ತು ಅನೇಕ ಪ್ರಶಸ್ತಿ ಸನ್ಮಾನಗಳನ್ನು ಗಳಿಸಿರುವ ಇವರು ಕೆಲವು ಕಾಲ ‘ಸೃಜನ ವೇದಿ’ ಎಂಬ ನಿಯತಕಾಲಿಕವನ್ನು ಪ್ರಕಟಿಸಿದ್ದಾರೆ.

## 2. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

ಕನ್ನಡದ ಹಿರಿಯ ಲೇಖಕ ಶ್ರೀ ಜಿ. ಎಸ್. ಆಮೂರ (ಗುರುರಾಜ ರಾಮಾ ಚಾರ್ಯ ಆಮೂರ) ಅವರಿಗೆ ಈ ಬಾರಿಯ (೧೯೯೬) ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ.

ದಿವಂಗತ ದ. ರಾ. ಬೇಂದ್ರೆ ಅವರ ಸೃಜನಶೀಲತೆಯ ಒಳನೋಟವನ್ನು ಬೀರುವ “ಭುವನದ ಭಾಗ್ಯ” ಎಂಬ ಕೃತಿಗಾಗಿ ಆಮೂರರಿಗೆ ಈ ಪ್ರಶಸ್ತಿ ದೊರಕಿದೆ.

## 3. ಆರ್ಯಭಟ ಸಾಹಿತ್ಯ ಪ್ರಶಸ್ತಿ

ರಾಷ್ಟ್ರೀಯ ವಿವಿಧರಂಗಗಳಲ್ಲಿ ಸೇವೆ ಸಲ್ಲಿಸುತ್ತಿರುವ ಪ್ರತಿಭಾನ್ವಿತರನ್ನು ಗುರುತಿಸಿ ಪ್ರೋತ್ಸಾಹಿಸುವ ‘ಆರ್ಯಭಟ’ ಎಂಬ ಸಾಂಸ್ಕೃತಿಕ ಸಂಸ್ಥೆಯು ಅದೇ ಹೆಸರಿನಲ್ಲಿ ಸಾಹಿತ್ಯ ಪ್ರಶಸ್ತಿಗಳನ್ನು ನೀಡುತ್ತಿದೆ.

ಡಾ || ಎಚ್. ನರಸಿಂಹಯ್ಯ ಅವರ ‘ಹೋರಾಟದ ಹಾದಿ’ ಎಂಬ ಕೃತಿ, ೧೯೯೫ನೆಯ ವರ್ಷದ ಸಾಹಿತ್ಯಪ್ರಶಸ್ತಿಗೆ ಪಾತ್ರವಾಯಿತು. ಡಾ|| ಎನ್. ಎಸ್. ಲಕ್ಷ್ಮೀ ನಾರಾಯಣ ಭಟ್ಟ, ಡಾ|| ಎಚ್.ಎಸ್. ಶಿವಪ್ರಕಾಶ್, ಕತೆಗಾರ ನಾಗತಿಹಳ್ಳಿ ಚಂದ್ರಶೇಖರ, ವೈದ್ಯೆ ಡಾ || ಸಿ. ಅನ್ನಪೂರ್ಣಮ್ಮ, ಡಾ|| ಎಚ್. ಗಿರಿಜಮ್ಮ-ಮುಂತಾದವರು ಸೇರಿದಂತೆ ಇಪ್ಪತ್ತು ಮಂದಿ ೯೫ನೆಯ ವರ್ಷದ ಪ್ರಶಸ್ತಿಗಳನ್ನು ಪಡೆದರು.

## 4. ಮಹಿಳಾ ಸಾಹಿತ್ಯ ಪ್ರಶಸ್ತಿ

ಮಹಿಳಾ ಸಾಹಿತ್ಯ ಸೇವಾ ಸಂಸ್ಥೆಯಾಗಿ ಇತ್ತೀಚೆಗೆ ರೂಪಗೊಂಡಿರುವ ಕನ್ನಡ ಲೇಖಕಿಯರ ಪರಿಷತ್ತಿನಿಂದ ಸ್ಥಾಪಿತವಾದ ಸೃಜನಶೀಲ ಸಾಹಿತ್ಯ ಪ್ರಶಸ್ತಿ ಜನಪ್ರಿಯ

ಲೇಖಕಿ ಡಾ|| ನಿರುಪಮಾ ಅವರ "ಧರ್ಮಶಾಸ್ತ್ರಗಳು, ಸ್ತ್ರೀ ಹಾಗೂ ಶೋಷಣೆ" ಎಂಬ ಕೃತಿಗೆ ದೊರಕಿದೆ. ೧೯೯೬ರಲ್ಲಿ ಹೊರಬಂದ ಸ್ನೇಹಾ ಅವರ ವೈದ್ಯ ಕೃತಿ- 'ಮನೋರೋಗ ಗೆಲ್ಲಬಹುದು'- ಡಾ || ವಿಜಯಾ ಸುಬ್ಬರಾಜ್-ಅವರ ಕವನ ಸಂಕಲನ- 'ಹಾಡೇನಾ ಪಾಡೇನಾ', ಭುವನೇಶ್ವರಿ ಹೆಗಡೆಯವರ ಹಾಸ್ಯಕೃತಿ 'ಎಂಥದು ಮಾರಾಯ್ರೆ', ವಿ. ಎಸ್. ಪ್ರಭಾವತಿಯವರ ಕಾದಂಬರಿ- 'ದ್ರೌಪದಿ', ಇಂದುಮತಿ ಆದ್ಯರ ಶಿಶುಸಾಹಿತ್ಯ- "ಸವಿಗಂಧ", ಮನೋರಮಾ ಭಟ್ ಅವರ ನಾಟಕ-'ಬಲಿ', ಸಾರಾ ಅಬೂಬಕರರ ಕಥಾಸಂಕಲನ- 'ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು', ಮಧು ವೆಂಕಾರೆಡ್ಡಿಯವರ ಅನುವಾದ ಕೃತಿ-'ತೇರೀಗಾಥಾ' ಎಂಬವೂ ಪ್ರಶಸ್ತಿ ಪಡೆದಿವೆ.

ಸಮಗ್ರ ಕನ್ನಡ ಸಾಹಿತ್ಯವನ್ನು ಪರಿಗಣಿಸಿ ಪ್ರಶಸ್ತಿಯನ್ನು ಹಿರಿಯ ಲೇಖಕಿ ಡಾ || ಕಮಲಾ ಹಂಪನಾ-ಅವರಿಗೆ 'ವರ್ಷದ ಲೇಖಕಿ-96' ಎಂಬ ಹೆಸರಿನಲ್ಲಿ ನೀಡಲಾಯಿತು.

**5. ಪಾಟೀಲ ಪ್ರತಿಷ್ಠಾನ ಪುರಸ್ಕಾರ**

ಗುಲಬರ್ಗಾದ ಎಸ್. ಆರ್. ಪಾಟೀಲ ಪ್ರತಿಷ್ಠಾನದ ೧೯೯೬ನೆಯ ವರ್ಷದ ಪ್ರಶಸ್ತಿ ಹೆಸರಾಂತ ಕವಿ-ಚೆನ್ನವೀರ ಕಣವಿಯವರಿಗೂ, ಖ್ಯಾತ ಕ್ಲಾರಿನೆಟ್ ವಾದಕರಾದ ನರಸಿಂಹಲು ವಡವಾಟಿ-ಎಂಬವರಿಗೂ ದೊರಕಿದೆ. ಸಾಹಿತ್ಯ, ಸಂಗೀತ, ಕಲೆ, ಸಮಾಜ ಸೇವೆ ಒಳಗೊಂಡಂತೆ ಹಲವು ಕ್ಷೇತ್ರಗಳಲ್ಲಿ ಉತ್ತಮ ಸಾಧನೆ ಮಾಡಿದ ಉತ್ತರ ಕರ್ನಾಟಕದ ಪ್ರತಿಭಾವಂತರನ್ನು ಗುರುತಿಸುವುದೇ ಈ ಪ್ರತಿಷ್ಠಾನದ ಗುರಿಯಾಗಿರುತ್ತದೆ. ಪ್ರತಿಯೊಂದು ಪ್ರಶಸ್ತಿ ಐದು ಸಾವಿರ ರೂ. ಗಳನ್ನು ಪ್ರಶಸ್ತಿ ಪತ್ರಗಳನ್ನು ಒಳಗೊಂಡಿದೆ.

**6. ಇನಾಂದಾರ್ ಪ್ರಶಸ್ತಿ**

ಪ್ರೊ|| ವಿ. ಎಂ. ಇನಾಂದಾರ್ ಪ್ರಶಸ್ತಿಯನ್ನು ಖ್ಯಾತ ವಿಮರ್ಶಕರಾದ ಪ್ರೊ|| ಕೀರ್ತಿನಾಥ ಕುರ್ತಕೋಟಿ-ಅವರಿಗೆ ನೀಡಿ, ಸನ್ಮಾನಿಸಲಾಯಿತು.

**7. ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ**

೧೯೯೬ನೆಯ ವರ್ಷದ ಗೌರವ ಪ್ರಶಸ್ತಿಗಳು- ರಾಘವೇಂದ್ರ ಖಾಸನೀಸ್, ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ, ಡಾ|| ಸಿದ್ಧಲಿಂಗಯ್ಯ, ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರಿ-ಅವರಿಗೆ ದೊರಕಿದವು. ೧೯೯೫ನೆಯ ವರ್ಷದ ಪುಸ್ತಕ ಬಹುಮಾನಗಳನ್ನು ಎಚ್. ಎಸ್. ಶಿವಪ್ರಕಾಶ್, ರವಿ ಬೆಳಗೆರೆ, ಎಂ.ಎಸ್.ಕೆ. ಪ್ರಭು, ಲತಾ ಗುತ್ತಿ. ಬಿ. ಪಿ. ರಾಧಾಕೃಷ್ಣ, ಡಾ|| ಎಚ್. ನರಸಿಂಹಯ್ಯ, ಬಿ. ಎನ್. ಸುಮಿತ್ರಾಬಾಯಿ, ಫ. ಗು. ಸಿದ್ದಾಪುರ, ಡಾ|| ಚೆನ್ನಕ್ಕ ಪಾವಟೆ, ಎಸ್. ಎಂ. ರಾಮಚಂದ್ರಸ್ವಾಮಿ, ಡಾ|| ಗುರುದತ್ತ, ಡಾ|| ದೊಡ್ಡೇರಿ ವೆಂಕಟಗಿರಿರಾವ್, ಶ್ರೀಧರ ಬಳಗಾರ, ಡಾ|| ಪಿ.ಎಸ್.

ರಾಮಾನುಜಂ, ಎಸ್. ಶಿವಣ್ಣ, ಜಿ. ರಾಮಕೃಷ್ಣ, ಸುಷ್ಮಾ ಚಂದ್ರಶೇಖರ್ ಇವರ ಗಳು ಪಡೆದಿದ್ದಾರೆ.

8. ಸಾಹಿತ್ಯ ಪ್ರಶಸ್ತಿ

ಅತ್ತಿಮಬ್ಬೆ ಪ್ರತಿಷ್ಠಾನ ಇನ್ನೊಂದು ಮಹಿಳಾ ಸಾಹಿತ್ಯ ಸೇವಾಸಂಸ್ಥೆ. ಈ ವರ್ಷ ಕನ್ನಡ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ಕೃತಿರಚನೆ ಮಾಡಿದ ಹನ್ನೆರಡು ಮಂದಿ ಮಹಿಳೆಯರಿಗೆ ಪ್ರಶಸ್ತಿ ಪತ್ರವನ್ನು ನೀಡಿ ಗೌರವಿಸಿದೆ.

9. ವರ್ಧಮಾನ ಪ್ರಶಸ್ತಿ

ಮುಂಬಯಿಯ ಖ್ಯಾತ ವಿಜ್ಞಾನಿ ಮತ್ತು ಸಾಹಿತಿ ಡಾ|| ವ್ಯಾಸರಾವ್ ನಿಂಜೂರ್ ಅವರ 'ಚಾಮುಂಡೇಶ್ವರೀ ಭವನ' ಎಂಬ ಕಾದಂಬರಿಗೆ ವರ್ಧಮಾನ ಪ್ರಶಸ್ತಿ ದೊರಕಿದೆ. ಈ ಪ್ರಶಸ್ತಿ ಆರು ಸಾವಿರ ರೂ. ಮತ್ತು ಪ್ರಶಸ್ತಿ ಪತ್ರವನ್ನೊಳಗೊಂಡಿದೆ. ಇದೇ ವರ್ಧಮಾನ ಪ್ರಶಸ್ತಿಯಲ್ಲಿ ಉದಯೋನ್ಮುಖ ಸಾಹಿತ್ಯಕ್ಕಾಗಿ ನೀಡಲಾಗುತ್ತಿರುವ ಮೂರು ಸಾವಿರ ರೂ. ಮತ್ತು ಪ್ರಶಸ್ತಿ ಪತ್ರವನ್ನೊಳಗೊಂಡ ಪ್ರಶಸ್ತಿಯನ್ನು ಹಂಪಿ ವಿಶ್ವವಿದ್ಯಾಲಯದ ಪ್ರಾಧ್ಯಾಪಕರೂ ಕತೆಗಾರರೂ ಆದ ಅಮರೇಶ ನುಗಡೋಣಿ ಅವರ 'ಮಣ್ಣು ಸೇರಿತು ಬೀಜ' ಎಂಬ ಕಥಾ ಸಂಕಲನಕ್ಕೆ ನೀಡಲಾಗಿದೆ. ಡಾ|| ನಿಂಜೂರರು ಮುಂಬಯಿಯ ಭಾಭಾ ಪರಮಾಣು ಸಂಶೋಧನ ಕೇಂದ್ರದಲ್ಲಿ ವಿಜ್ಞಾನಿಯಾಗಿದ್ದಾರೆ. ಮೂರು ಕಾದಂಬರಿಗಳನ್ನು, ಏಳು ನಾಟಕಗಳನ್ನೂ, ಸುಮಾರು 70ಕ್ಕೂ ಹೆಚ್ಚು ಸಣ್ಣ ಕತೆಗಳನ್ನೂ ರಚಿಸಿದ್ದಾರೆ. ನುಗಡೋಣಿಯವರು ರಾಯಚೂರಿನವರಾಗಿದ್ದೂ ಮೊದಲೇ ಬಹುಮಾನಿತ ಕಥೆಗಾರರಾಗಿದ್ದಾರೆ.

10. ಮಾಸ್ತಿ ಪ್ರಶಸ್ತಿ

ಪ್ರತಿವರ್ಷ ಒಂದೊಂದು ಪ್ರಕಾರಕ್ಕೆ ನೀಡುತ್ತಿರುವ ಮಾಸ್ತಿ ಪ್ರಶಸ್ತಿ ಸಮಿತಿಯು ಗ್ಗ್ಗ೭ನೆಯ ವರ್ಷದ ಪ್ರತಿಷ್ಠಿತ ಮಾಸ್ತಿ ಪ್ರಶಸ್ತಿಗೆ ನಾಟಕ ಸಾಹಿತ್ಯವನ್ನು ಆಯ್ಕೆ ಮಾಡಿದೆ. ಕನ್ನಡ ನಾಟಕ ಕ್ಷೇತ್ರದಲ್ಲಿ ಪಳಗಿದವರಾದ ಗಿರೀಶ ಕಾರ್ನಾಡ್ ಮತ್ತು ಡಾ || ಚಂದ್ರಶೇಖರ ಕಂಬಾರ ಅವರುಗಳಿಗೆ ಪ್ರಶಸ್ತಿಯನ್ನು ಹಂಚಲಾಗಿದೆ. ಪ್ರತಿಯೊಂದು ಪ್ರಶಸ್ತಿಯಲ್ಲಿ ಹದಿನೈದು ಸಾವಿರ ರೂ. ಮತ್ತು ಮಾಸ್ತಿ ಸ್ಮರಣ ಫಲಕಗಳಿರುತ್ತವೆ.

11. ಭಾರ್ಗವ ಪ್ರಶಸ್ತಿ

ಬೆಂಗಳೂರಿನಲ್ಲಿರುವ ದಕ್ಷಿಣ ಕನ್ನಡ ಜಿಲ್ಲೆಯ ಕನ್ನಡಿಗರ ವೇದಿಕೆ, ವಿವಿಧ ಕ್ಷೇತ್ರಗಳಲ್ಲಿ ಅಮೂಲ್ಯಸೇವೆ ಸಲ್ಲಿಸಿದ ದಕ್ಷಿಣ ಕನ್ನಡಿಗರ ಸೇವೆಯನ್ನು ಗೌರವಿಸುವ ಉದ್ದೇಶದಿಂದ 'ಭಾರ್ಗವ ಪ್ರಶಸ್ತಿ'ಯನ್ನು ಸ್ಥಾಪಿಸಿದೆ. ಪ್ರತಿ ಎರಡು ವರ್ಷಗಳಿಗೊಮ್ಮೆ ಹತ್ತು ಮಂದಿ ಗಣ್ಯರಿಗೆ ಭಾರ್ಗವ ಪ್ರಶಸ್ತಿ ನೀಡುವ ಯೋಜನೆ ಮಾಡಿಕೊಂಡಿದೆ.

ಸಾಹಿತ್ಯ, ಸಂಗೀತ, ಕಲೆಗಳನ್ನು ಪ್ರೋತ್ಸಾಹಿಸುವುದು ಮತ್ತು ಕನ್ನಡಕ್ಕೆ ಸಂಬಂಧಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಈ ಸಂಸ್ಥೆಯ ಮುಖ್ಯೋದ್ದೇಶ. ಈ ಪ್ರಶಸ್ತಿಗಳಲ್ಲಿ ಸಾಹಿತ್ಯ ಪ್ರಶಸ್ತಿಯನ್ನು ಡಾ|| ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟರಿಗೆ ಸಲ್ಲಿಸಲಾಗಿದೆ.

## 12. ಚಿದಾನಂದ ಪ್ರಶಸ್ತಿ

ಕರ್ನಾಟಕದ ಹಿರಿಯ ಸಾಹಿತಿ, ಶತಾಯುಷಿ,ಸಂಸ್ಕೃತ ವಿದ್ವಾಂಸ–ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಯವರಿಗೆ ಈ ವರ್ಷದ ಚಿದಾನಂದ ಪ್ರಶಸ್ತಿ ದೊರಕಿದೆ. ಪ್ರಶಸ್ತಿ ಹತ್ತು ಸಾವಿರ ರೂ. ಪ್ರಶಸ್ತಿ ಪತ್ರ ಹಾಗೂ ನೆನಪಿನ ಕಾಣಿಕೆಯನ್ನೊಳಗೊಂಡಿದೆ.

ಚಂದ್ರಶೇಖರ ಶಾಸ್ತ್ರಿಯವರಿಗೆ ಕಳೆದ ವರ್ಷ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವವೂ ಲಭಿಸಿದೆ. ಈ ಸಂಬಂಧದಲ್ಲಿ 'ವ್ಯಾಕರಣ ತೀರ್ಥ' ಎಂಬ ಪುಸ್ತಕವನ್ನು ಪರಿಷತ್ತು ಪ್ರಕಟಿಸಿದೆ.

## 13. ಅನುಪಮಾ ಪ್ರಶಸ್ತಿ

ಕರ್ನಾಟಕ ಲೇಖಕಿಯರ ಸಂಘದಿಂದ ನೀಡಲಾಗುವ ಈ ವರ್ಷದ ಅನುಪಮಾ ಪ್ರಶಸ್ತಿಗೆ ಕವಯಿತ್ರಿ ಶೈಲಜಾ ಉಡುಚಣ ಅವರನ್ನು ಆಯ್ಕೆ ಮಾಡಲಾಗಿದೆ. ಶೈಲಜಾ ಅವರ 'ನನ್ನಂಥವರು' ಎಂಬ ಕವನ ಸಂಕಲನಕ್ಕೆ ಈ ಪ್ರಶಸ್ತಿ ದೊರಕಿದೆ. ಪ್ರಶಸ್ತಿಯಲ್ಲಿ ಹತ್ತು ಸಾವಿರ ರೂ. ಮತ್ತು ಪ್ರಶಸ್ತಿ ಪತ್ರ ಇರುತ್ತವೆ. ಇವರೇ ನೀಡುವ ಸಾವಿತ್ರಮ್ಮ ದತ್ತಿನಿಧಿ ಬಹುಮಾನವು ಶ್ರೀಮತಿ ಕೆ. ಎನ್. ವಿಜಯಲಕ್ಷ್ಮೀ ಅವರಿಗೂ ಶ್ರೀಮತಿ ಗೀತಾ ದೇಸಾಯಿ ದತ್ತಿ ಬಹುಮಾನವು ಶ್ರೀಮತಿ ರೇಖಾ ಕಾಖಂಡಕೀ ಅವರಿಗೂ ಲಭಿಸಿದೆ.

## 14. ತುಳು ಅಕಾಡೆಮಿ ಸಾಹಿತ್ಯ ಪ್ರಶಸ್ತಿ

ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಯ ಎರಡನೆಯ ವರ್ಷದ (೧೯೯೬) ಗೌರವ ಪ್ರಶಸ್ತಿ ಪಡೆದವರಿವರು– ಪ್ರೊ|| ಕು. ಶಿ. ಹರಿದಾಸ ಭಟ್, ಕೆಲಿಂಜ ಸೀತಾರಾಮ ಆಳ್ವ, ಬಿ. ರಾಮ ಕಿರೋಡಿಯನ್, ಮಿಜಾರು ಅಣ್ಣಪ್ಪ. ಇವರ ಸಾಧನೆಯನ್ನು ಪ್ರೊ|| ಅಮೃತ ಸೋಮೇಶ್ವರ, ಡಾ|| ಯು.ಪಿ. ಉಪಾಧ್ಯಾಯ, ಶ್ರೀಮತಿ. ಕೆ. ಲೀಲಾವತಿ, ಶ್ರೀ ಮಾಧವ ಕುಲಾಲ್ ಅವರು ಪರಿಚಯಿಸಿದರು. ಅವುಗಳಲ್ಲಿ ಡಾ||ಎ. ಸುಬ್ಬಣ್ಣ ರೈ ಅವರ 'ಕನ್ನಡದಲ್ಲಿ ತುಳು' ವೈಚಾರಿಕವಾಗಿದ್ದು "ದ.ಕ. ಜಿಲ್ಲೆಯ ಐತಿಹ್ಯಗಳು" ಎಂಬ ಸಂಶೋಧನ ಗ್ರಂಥವೂ ಒಂದಾಗಿದೆ.

ಈ ಎಲ್ಲ ಪ್ರಶಸ್ತಿ, ಗೌರವ, ಸನ್ಮಾನಗಳನ್ನು ಪಡೆದ ಸಾಹಿತಿ ಮಹನೀಯರಿಗೆ ಬಿ.ಎಂ.ಶ್ರೀ ಪ್ರತಿಷ್ಠಾನದ ಹೃತ್ಪೂರ್ವಕ ಅಭಿನಂದನೆಗಳು.

# ಶ್ರದ್ಧಾಂಜಲಿ

## 1. ಕೆ. ಶಿವರಾಮ ಐತಾಳ

ಕನ್ನಡದಲ್ಲಿ ಹೆಸರಾಂತ ಲೇಖಕ, ವಿದ್ವಾಂಸ, ಸಂಶೋಧಕ ಕೆ. ಶಿವರಾಮ ಐತಾಳರು ೧೪-೪-೧೯೯೭ರಂದು ಮೈಸೂರಿನಲ್ಲಿ ನಿಧನಗೊಂಡರು. ಅವರಿಗೆ ೬೦ ವರ್ಷ ವಯಸ್ಸಾಗಿದ್ದಿತು. ಅವರಿಗೆ ಪತ್ನಿ ಹಾಗೂ ಮೂವರು ಪುತ್ರಿಯರಿದ್ದಾರೆ. ಶಿವರಾಮ ಐತಾಳರು ಮೈಸೂರಿನ ಶಾರದಾ ವಿಲಾಸ ಕಾಲೇಜಿನಲ್ಲಿ ಕನ್ನಡ ವಿಭಾಗದಲ್ಲಿ ಮುಖ್ಯಸ್ಥ ಪ್ರಾಧ್ಯಾಪಕರಾಗಿದ್ದರು. ಗೋಕಾಕ ಚಳುವಳಿಯಲ್ಲಿ ತಾತಯ್ಯ ಪ್ರತಿಮೆ ಬಳಿ 'ಒಂಟಿಕಾಲು ಸತ್ಯಾಗ್ರಹ' ನಡೆಸಿದ್ದರು.

ಅವರ ಪ್ರಕಟಿತ ಕೃತಿಗಳಲ್ಲಿ ಭಗ್ನಪ್ರೇಮ, ಕನ್ನಡ ಛಂದಸ್ಸಿನ ಪರಿಚಯ, ಛಂದಸ್ಸಿನ ಔಚಿತ್ಯ, ದಕ್ಷಿಣ ಕನ್ನಡದ ಜನಪದ ಸಾಹಿತ್ಯ (1971) ಹೊಸಬೆಳಕು, ದೇವರ ದಾಸಿಮಯ್ಯನ ಷಟ್ಪದಿಗಳು, ಕನ್ನಡ ಕಾವ್ಯಕತೆಗಳು- ಉಲ್ಲೇಖನೀಯವಾಗಿವೆ.

## 2. ಅಗರಿ ಶ್ರೀನಿವಾಸ ಭಾಗವತರು

ತೆಂಕುತಿಟ್ಟಿನ ಖ್ಯಾತ ಯಕ್ಷಗಾನ ಭಾಗವತರೂ ಯಕ್ಷಗಾನ ಪ್ರಸಂಗ ಕರ್ತೃ ಕವಿಯೂ ಆಗಿರುವ ಅಗರಿ ಶ್ರೀನಿವಾಸ ಭಾಗವತರು ಮಂಗಳೂರಿಗೆ ಸಮೀಪದ ಎಡಪದವು ಎಂಬಲ್ಲಿಯ ತಮ್ಮ ನಿವಾಸದಲ್ಲಿ ದಿನಾಂಕ ೧೩-೩-೧೯೯೭ ರಂದು ತೀರಿಕೊಂಡರು. ಅವರಿಗೆ ೯೧ ವರ್ಷ ವಯಸ್ಸಾಗಿದ್ದಿತು. ಅವರು ನಾಲ್ವರು ಪುತ್ರರನ್ನೂ ಮೂವರು ಪುತ್ರಿಯರನ್ನೂ ಆಗಲಿದ್ದಾರೆ. ಅವರ ಹಾಡುಗಾರಿಕೆಯ ವೈಖರಿ 'ಅಗರಿ ಶೈಲಿ' ಎಂದೇ ಹೆಸರುಗೊಂಡಿದೆ. ಧರ್ಮಸ್ಥಳ ಶ್ರೀ ಮಂಜುನಾಥೇಶ್ವರ ಮೇಳವೂ ಸೇರಿದಂತೆ ದ. ಕ. ಜಿಲ್ಲೆಯ ಹಲವಾರು ವೃತ್ತಿನಿರತ ಯಕ್ಷಗಾನ ಮೇಳಗಳಲ್ಲಿಯೂ ಅವರು ಭಾಗವತಿಕೆಯನ್ನು ಮೆರೆಸಿ ಕೀರ್ತಿಗಳಿಸಿರುತ್ತಾರೆ.

## 3. ತಿಟ್ಟೆ ಕೃಷ್ಣಯ್ಯಂಗಾರ್ಯರು

ಪ್ರಸಿದ್ಧ ವಾಗ್ಗೇಯಕಾರರಾದ ತಿಟ್ಟೆ ಕೃಷ್ಣಯ್ಯಂಗಾರ್ಯರು ದಿನಾಂಕ 16-3-97 ರಂದು ಬೆಳಗ್ಗೆ ಮೈಸೂರು ನಗರದಲ್ಲಿ ನಿಧನರಾದರು. ಅವರಿಗೆ 95 ವರ್ಷ ವಯಸ್ಸಾಗಿತ್ತು. ಸಂಗೀತ ವಿದ್ವಾಂಸರ ಮನೆತನದಲ್ಲಿ ಜನಿಸಿ ತಾವೂ ಸಂಗೀತದಲ್ಲಿ ಮಹಾನ್ ವಿದ್ವಾಂಸರಾಗಿದ್ದು, ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಸ್ಥಾನ ವಿದ್ವಾಂಸರಾಗಿದ್ದು ಸಂಗೀತ ಪ್ರಪಂಚದಲ್ಲಿ ಹಿರಿಮೆಯನ್ನು ಗಳಿಸಿದ್ದರು. ಹಲವಾರು ಶಿಷ್ಯರನ್ನು

ತಯಾರು ಮಾಡಿದ್ದರು. ಅವರ ನಿಧನದಿಂದ ಸಂಗೀತ ಶಾಸ್ತ್ರ ಪ್ರಪಂಚಕ್ಕೆ ತುಂಬಲಾರದ ನಷ್ಟವುಂಟಾಗಿದೆ.

ಇತ್ತೀಚಿಗೆ ಪ್ರತಿಷ್ಠಾನ ನಡೆಸಿದ್ದ 'ಈ ಶತಮಾನದ ಹಿರಿಯರು-ಒಂದು ಸಂಸಾರ' ಎಂಬ ವಿಶಿಷ್ಟ ಕಾರ್ಯಕ್ರಮದಲ್ಲಿ 90 ವರ್ಷಗಳನ್ನು ದಾಟಿದ್ದ ಹತ್ತು ಮಂದಿ ಈ ಶತಮಾನದ ಹಿರಿಯ ಗಣ್ಯರಲ್ಲಿ ಒಬ್ಬರಾಗಿ ಭಾಗವಹಿಸಿದ್ದರು.

ಅತ್ಯಂತ ಲವಲವಿಕೆಯಿಂದ ಈ ಸಂವಾದದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಶ್ರೀ ತಿಟ್ಟೆಯವರನ್ನು ಪ್ರತಿಷ್ಠಾನ ಗೌರವಿಸಿತ್ತು.

**4. ಚಿ. ನ. ಮಂಗಳಾ**

ಶ್ರೀ ಚಿ.ನ. ಮಂಗಳ ಅವರು ೩೦-೫-೧೯೯೭ ರಂದು ಹೃದಯಾಘಾತದಿಂದ ತಮ್ಮ 59ನೆಯ ವಯಸ್ಸಿನಲ್ಲಿ ದೈವಾಧೀನರಾದರು. ಮಹಿಳೆಯರ ಜಾಗೃತಿಗೆ ಮತ್ತು ಏಳಿಗೆಗಾಗಿ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡ ಇವರ ಬಹುಮುಖ ಸೇವೆ ಅಸಾಧಾರಣ.

ಶಿಕ್ಷಣ ಕ್ಷೇತ್ರಕ್ಕೆ ಸೇವೆ ಸಲ್ಲಿಸುವುದರೊಂದಿಗೆ ಸಾಹಿತ್ಯಸೇವೆಯನ್ನು ಮಾಡಿ, ರೋಟರೀ ಕ್ಲಬ್ಬಿನ 'ಸಾಹಿತ್ಯ ಶ್ರೀ' ಬಿರುದನ್ನು, ೧೯೯೦ರ ರಾಜ್ಯೋತ್ಸವ ಪ್ರಶಸ್ತಿಯನ್ನು, ಸಾಹಿತ್ಯ ಪರಿಷತ್ತಿನ ಮಲ್ಲಿಕಾ ಬಹುಮಾನವನ್ನು, ಕರ್ನಾಟಕ ವಿದ್ಯಾವರ್ಧಕ ಸಂಘದ ರತ್ನಮ್ಮ ಹೆಗ್ಗಡೆ ಬಹುಮಾನವನ್ನು (೧೯೯೦), ಆರ್ಯಭಟ ಸಾಹಿತ್ಯ ಪ್ರಶಸ್ತಿಯನ್ನು (೧೯೯೩) ಪಡೆದಿರುತ್ತಾರೆ. ಕೇಂದ್ರಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಇವರಿಗೆ ದೊರಕಿದೆ.

ಪ್ರತಿಷ್ಠಾನದ ಸದಸ್ಯರೂ ಹಿತೈಷಿಗಳೂ ಆಗಿದ್ದ ದಿವಂಗತರು ಕೆಲಕಾಲ ಕಾರ್ಯ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದರು. ಎನ್. ಎಂ. ಕೆ. ಆರ್. ವಿ. ಮಹಿಳಾ ಕಾಲೇಜಿನ ಪ್ರಾಂಶುಪಾಲರಾಗಿ ಒಳ್ಳೆಯ ಆಡಳಿತಗಾರರೂ ಆಗಿದ್ದರು.

**5. ಸಿ.ಓಂಕಾರಪ್ಪ**

ಹಲವು ಸರ್ಕಾರಿ ಕಾಲೇಜುಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಡಾ|| ಸಿ. ಓಂಕಾರಪ್ಪನವರು ಇನ್ನಿಲ್ಲವಾಗಿದ್ದಾರೆ. 'ಕುಮಾರವ್ಯಾಸ ಭಾರತದ ಭಾಷಾ ವೈಜ್ಞಾನಿಕ ವಿಶ್ಲೇಷಣೆ' ವಿಷಯವಾಗಿ ಇಂಗ್ಲೀಷಿನಲ್ಲಿ 1968ರಲ್ಲಿ ಪುಣೆ ವಿಶ್ವವಿದ್ಯಾನಿಲಯದಲ್ಲಿ ಪಿ. ಎಚ್ ಡಿ. ಮಾಡಿದ್ದ ದಿವಂಗತರು ಡಿ. ಎಲ್. ಎನ್. ಪ್ರಸಿದ್ಧ ಭಾಷಾವಿಜ್ಞಾನಿ ಟಿ. ಬರೋ (ಆಕ್ಸ್‌ಫರ್ಡ್) ಮುಂತಾದ ಘನ ವಿದ್ವಾಂಸರ ಪ್ರಶಂಸೆಗೆ ಪಾತ್ರರಾಗಿದ್ದರು. ಭಾಷಾವಿಜ್ಞಾನ, ಕಾವ್ಯಮೀಮಾಂಸೆ, ವ್ಯಾಕರಣ ಮುಂತಾದ ಶಾಸ್ತ್ರ ಸಾಹಿತ್ಯದಲ್ಲಿ ವಿಶೇಷ ಪರಿಣತಿ ಹೊಂದಿದ್ದರು. ಕರ್ನಾಟಕ ಲೋಚನದಲ್ಲಿ

ಶ್ರೀಯುತರ ಹಲವಾರು ಲೇಖನಗಳು ಪ್ರಕಟವಾಗಿವೆ. ಪ್ರತಿಷ್ಠಾನದ ಹಿತೈಷಿಗಳು ಆಗಿದ್ದ ದಿವಂಗತರ ಅಗಲಿಕೆ ಸಾರಸ್ವತಲೋಕಕ್ಕೆ ಅಪಾರ ನಷ್ಟವಾಗಿದೆ.

6. ಸ. ವೆಂಕಟಾಚಲಪತಿ

ಪ್ರತಿಷ್ಠಾನದ ಹಿತೈಷಿಗಳೂ, ಲೋಚನದ ಸದಸ್ಯರೂ ಆಗಿದ್ದ ಹಿರಿಯರಾದ ಸರ್ಜಾಪುರ ವೆಂಕಟಾಚಲಪತಿ ಅವರು 17-1-97 ರಂದು ದೈವಾಧೀನರಾಗಿದ್ದಾರೆ. ಗೋಖಲೆ ಸಂಸ್ಥೆಯ ಸ್ಥಾಪನೆಯ ದಿನದಿಂದಲೂ ಡಿ. ವಿ. ಜಿ. ಅವರ ಸಹಾಯಕರಾಗಿದ್ದು ಸಂಸ್ಥೆಯ ನಿಕಟವರ್ತಿಗಳಾಗಿ ನಿಧನದವರೆಗೂ ಸೇವೆಸಲ್ಲಿಸಿರುವ ದಿವಂಗತರು ಹಲವಾರು ಕೃತಿಗಳನ್ನು ಅನುವಾದ ಮಾಡಿದ್ದಾರೆ. ಕನ್ನಡ, ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ಸಮನಾದ ಪಾಂಡಿತ್ಯವಿದ್ದ ದಿವಂಗತರು ಸ್ಕಾಟ್‌ಸಿಯರಿಂಗ್‌ನ ಎರಡು ಕೃತಿಗಳನ್ನೂ ವಾಸಿಷ್ಠ ಗಣಪತಿ ಮುನಿಯ ನಾಲ್ಕು ಕೃತಿಗಳನ್ನು ಒಳಗೊಂಡಂತೆ ಹತ್ತಕ್ಕೂ ಹೆಚ್ಚು ಗ್ರಂಥಗಳನ್ನು ಕನ್ನಡಕ್ಕೆ ನೀಡಿದ್ದಾರೆ. ದಿವಂಗತ ಸೀತಾರಾಮಯ್ಯನವರು ಅರ್ಧಕ್ಕೆ ಬಿಟ್ಟಿದ್ದ ಶ್ರೀ ಕೃಷ್ಣಬಾಲಲೀಲೆಯ ಎರಡನೇ ಭಾಗಕ್ಕೆ ಟಿಪ್ಪಣಿ ಬರೆಯಲು ಒಪ್ಪಿದ್ದರಾದರೂ ಅನಾರೋಗ್ಯ ಕಾರಣದಿಂದ ದಿವಂಗತರಿಂದ ಪ್ರತಿಷ್ಠಾನ ಆ ಭಾಗ್ಯವನ್ನು ಪಡೆಯಲಾಗಲಿಲ್ಲ.

ಇವರುಗಳ ಆತ್ಮಕ್ಕೆ ಚಿರಶಾಂತಿಯೊದಗುವಂತೆ ಬಿ. ಎಂ. ಶ್ರೀ. ಪ್ರತಿಷ್ಠಾನ ಹಾಗೂ ಕರ್ನಾಟಕ ಲೋಚನ ಗೌರವಪೂರ್ವಕ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

## ರಾಸ ಸಾಹಿತ್ಯ ದತ್ತಿ ಸ್ಪರ್ಧೆಗೆ ಪ್ರಬಂಧಗಳ ಆಹ್ವಾನ

ಹಿರಿಯ ಸಾಹಿತಿಗಳಾದ ಸಮೇತನಹಳ್ಳಿ ರಾಮರಾವ್ ಅವರು ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ತಮ್ಮ ಪ್ರಕಟನ ಸಂಸ್ಥೆಯಾದ 'ರಾಸ ಸಾಹಿತ್ಯ'ದ ಹೆಸರಿನ ದತ್ತಿಯ ಮೂಲಕ ಪ್ರತಿವರ್ಷ ಅವರ ಕೃತಿಗಳನ್ನು ಕುರಿತ ಪ್ರಬಂಧವೊಂದಕ್ಕೆ 250/-ರೂಗಳ ಬಹುಮಾನವನ್ನು ನೀಡಲಾಗುವುದು.

ಸಾಹಿತ್ಯಾಸಕ್ತರು, ವಿದ್ಯಾರ್ಥಿಗಳು ಸಮೇತನಹಳ್ಳಿ ರಾಮರಾಯರ ಯಾವುದಾದರೊಂದು ಕೃತಿಯನ್ನು ಕುರಿತು 5 ಪುಟಕ್ಕೆ ಮೀರದಂತೆ ಒಂದು ವಿಮರ್ಶಾ ಪ್ರಬಂಧವನ್ನು ಜುಲೈ ತಿಂಗಳೊಳಗೆ ಪ್ರತಿಷ್ಠಾನದ ವಿಳಾಸಕ್ಕೆ ಕಳುಹಿಸಲು ಕೋರಿದೆ.

## ಚಂದಾ ನವೀಕರಿಸಲು ಮನವಿ

ಕರ್ನಾಟಕ ಲೋಚನದ ವಾರ್ಷಿಕ ಚಂದಾ ಅವಧಿ ಡಿಸೆಂಬರ್‌ಗೆ ಮುಗಿದಿದ್ದು ಎಲ್ಲ ಚಂದಾದಾರರೂ 97 ನೇ ಅವಧಿಗೆ 15-00 (ಸಂಸ್ಥೆಗಳು ಗ್ರಂಥಾಲಯಗಳಿಗೆ 25-00) ರೂಗಳನ್ನು ಕಳುಹಿಸಿ ಕೊಟ್ಟು ಚಂದಾ ನವೀಕರಿಸಲು ವಿನಂತಿ.

ಸಾಧ್ಯವಾದರೆ 150-00 (ಸಂಸ್ಥೆಗಳು 250-00) ರೂಗಳನ್ನು ನೀಡಿ ಅಜೀವ ಚಂದಾದಾರರಾದರೆ ಸುಕರ.

ಗೌ. ಕಾರ್ಯದರ್ಶಿ

## ಈ ಸಂಚಿಕೆಯ ಲೇಖಕರು


೧. ತಲಂಗಳ ರಾಮಕೃಷ್ಣ ಭಟ್ಟ
ಬಾಯೂರು 671 348
ವಯಾ- ಪೈವಳಿಕೆ, ಕಾಸರಗೋಡು ಜಿಲ್ಲೆ, ಕೇರಳ.

೨. ಟಿ. ಕೇಶವಭಟ್ಟ
754, ಶ್ರೀವರ್ಧನ, 15ನೇ ಮುಖ್ಯರಸ್ತೆ,
ಬನಶಂಕರಿ, 2ನೇಹಂತ ಬೆಂಗಳೂರು-70.

೩. ಕೆ. ಪಿ.ರಾಜಗೋಪಾಲ್
754, 15ನೇ ಮುಖ್ಯರಸ್ತೆ
ಬನಶಂಕರಿ 2ನೇ ಹಂತ, ಬೆಂಗಳೂರು-70

೪. ಗಮಕಿ ಆರ್. ಶಂಕರನಾರಾಯಣ
67, ಸತ್ಯಶ್ರೀ, ಐಟಿಐ ಲೇಔಟ್
ವಿದ್ಯಾಪೀಠ, ಬೆಂಗಳೂರು-85

೫. ತಾಳ್ತಜೆ ಕೃಷ್ಣ ಭಟ್
ಪಂಜಳಮನೆ ಅಂಚೆ, ಉಪ್ಪಿನಂಗಡಿ-574 241.
ದಕ್ಷಿಣ ಕನ್ನಡ ಜಿಲ್ಲೆ.

೬. ಹೆಚ್. ಜಯಮ್ಮ
2933, ಆಶೀರ್ವಾದ, 13ನೇ ಮುಖ್ಯರಸ್ತೆ
ವಿಜಯನಗರ 2ನೇ ಹಂತ, ಬೆಂಗಳೂರು-40.

೭. ಬಿ. ರಾಜಶೇಖರಪ್ಪ
ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆಕಾಲೇಜು
ಹೊಸದುರ್ಗ- 577527

೮. ವ್ಹಿ. ಜಿ. ಪೂಜಾರ್
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ
ಗುಲ್ಬರ್ಗ ವಿಶ್ವವಿದ್ಯಾಲಯ, ಗುಲ್ಬರ್ಗಾ

೯. ಜಿ. ಪಿ ಶಿವಲಿಂಗಯ್ಯ
370/1, ಡಿ. ಸುಬ್ಬಯ್ಯ ರಸ್ತೆ,
ಮೈಸೂರು–24.

೧೦. ಪ್ರೊ. ಸಿ. ಮಹಾದೇವಪ್ಪ.
ರಿಸರ್ಚ್ ಕಾರ್ನರ್, 187ನೇ ಮುಖ್ಯರಸ್ತೆ
ಬೆಂಗಳೂರು–8.

೧೧. ಎಚ್. ವಿ. ರಾಮಚಂದ್ರರಾವ್
60–1 (3). ಮೊದಲನೇ ಅಡ್ಡ ರಸ್ತೆ,
ಶಾಕಾಂಬರಿ ನಗರ, ಸಾರಕ್ಕಿ ಲೇಔಟ್,
ಬೆಂಗಳೂರು–78.

೧೨. ಹೆಚ್. ರಾಮಣ್ಣ
229, 12ನೇಮೈನ್, 2ನೇಕ್ರಾಸ್
ಸರಸ್ವತೀಪುರಂ, ಮೈಸೂರು-570 009

೧೩. ಎನ್. ನರಹರಿ
ಕನ್ನಡ ಪ್ರಾಧ್ಯಾಪಕರು
ಸರ್ಕಾರಿ ಕಲಾ ಕಾಲೇಜು, ಬೆಂ.1

## ಪ್ರತಿಷ್ಠಾನದ ಗೌರವ ಸದಸ್ಯರು

1) ಪ್ರೊ|| ಎ. ಎನ್. ಮೂರ್ತಿರಾವ್. 2) ಡಾ|| ಪು.ತಿ.ನ. 3) ಪ್ರೊ|| ಎಸ್. ವಿ. ಪರಮೇಶ್ವರಭಟ್ಟ. 4) ಪ್ರೊ|| ತ. ಸು. ಶಾಮರಾವ್ 5) ಡಾ|| ಜಿ. ಎಸ್. ದೀಕ್ಷಿತ್ 6) ವಿದ್ವಾನ್ ಎನ್. ರಂಗನಾಥ ಶರ್ಮ 7) ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ 8) ಡಾ|| ಆರ್. ಸಿ. ಹಿರೇಮಠ್.

## ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

## ವಿನಿಮಯ ಪತ್ರಿಕೆಗಳು

1) ಪ್ರಬುದ್ಧ ಕರ್ನಾಟಕ, ಮಾನವಿಕ ಕರ್ನಾಟಕ, ವಿಜ್ಞಾನ ಕರ್ನಾಟಕ, ಮೈಸೂರು 2) ಸಾಧನೆ, ಬೆಂಗಳೂರು 3) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು. 4) ಮಿಥಿಕ್ ಸೊಸೈಟಿ ಜರ್ನಲ್, 5) ಬಸವ ಪಥ, ಬೆಂಗಳೂರು. 6) ಶಂಕರ ಭಾಸ್ಕರ, ಬೆಂಗಳೂರು. 7) ಧರ್ಮಪ್ರಭ, ಬೆಂಗಳೂರು 8) ಜಾನಪದ ಜಗತ್ತು, ಬೆಂಗಳೂರು. 9) ಅನ್ವೇಷಣೆ, ಬೆಂಗಳೂರು. 10) ಅಪರಂಜಿ, ಬೆಂಗಳೂರು 11) ಕರ್ನಾಟಕ ಭಾರತಿ, ಧಾರವಾಡ. 12) ಸುಗುಣಮಾಲಾ, ಉಡುಪಿ. 13) ಸತ್ಯಶುದ್ಧ ಕಾಯಕ, ಸಿರಿಗೆರೆ. 14) ತರಳಬಾಳು, ಸಿರಿಗೆರೆ. 15) ಅಭಿಮತ, ದೆಹಲಿ.

ಕರ್ನಾಟಕ ಲೋಚನ ಚಂದಾ ವಿವರ

| | | |
|---|---|---|
| ವಾರ್ಷಿಕ ಚಂದಾ | : | ವ್ಯಕ್ತಿಗಳಿಗೆ ರೂ. 15-00<br>ಗ್ರಂಥಾಲಯ, ಸಂಘ ಸಂಸ್ಥೆಗಳಿಗೆ ರೂ. 25-00 |
| ಆಜೀವ | : | ರೂ. 150-00<br>ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ.<br>ಬಿಡಿ ಪ್ರತಿ ರೂ. 10.00 |
| ಪ್ರತಿಷ್ಠಾನದ ಸದಸ್ಯತ್ವ | | ವಾರ್ಷಿಕ ರೂ. 25-00 ಆಜೀವ ರೂ. 250-00 |

KARNATAKA LOCHANA Half Yearly Journal, Published by B. M. Sri. Smaraka Prathishthana, 54, M. V. Seetharamaiah Road, Masthi Nagara, (Gavipuram Extension), Bangalore-19 Printed by : Prabhu Mudrana, Shakambari Nagar, Sarakki, Bangalore-560 078. Phone : 6640976

Reg. No. 03260/23/2/ALTC/88 KARNATAKA LOCHANA

# ಪ್ರತಿಷ್ಠಾನದ ಈಚಿನ ಪ್ರಕಟಣೆಗಳು

| | | ಉತ್ತಮ | ಸಾದಾ |
|---|---|---|---|
| 1. | ಸಂಗಮರ ಕಾಲದ ವಿಜಯನಗರ | | 75-00 |
| 2. | ಕುಮಾರವ್ಯಾಸ ಭಾರತ ಸಂಗ್ರಹ | 75-00 | 40-00 |
| 3. | ಕಾವ್ಯ-ಇತಿಹಾಸ (ದತ್ತಿ ಉಪನ್ಯಾಸಗಳು) | | 10-00 |
| 4. | ಶಂಬಾ ಕೃತಿ ಸಮೀಕ್ಷೆ | | 35-00 |
| 5. | ಎಂ. ವಿ. ಸೀ. ಸಂಸ್ಮರಣೆ | | 25-00 |
| 6. | ವೈಚಾರಿಕ ಜಾಗೃತಿ | | 15-00 |
| 7. | ಹಸ್ತಪ್ರತಿಶಾಸ್ತ್ರ ಪರಿಚಯ | | 20-00 |
| 8. | ಸಂವಿಧಾನ ಮತ್ತು ಕಾನೂನು | | 25-00 |
| 9. | ಮಾಸ್ತಿ ಕಥಾ ಸಮೀಕ್ಷೆ | | 20-00 |
| 10. | ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಜೀವನ ಚರಿತ್ರೆ) | | 15-00 |
| 11. | ಬಸವಪ್ಪ ಶಾಸ್ತ್ರಿಗಳು | | 25-00 |
| 12. | ನವ್ಯಸ್ಫೂರ್ತಿ (ಗೋಕಾಕ್ ಸಾಹಿತ್ಯ ಸಮೀಕ್ಷೆ) | | 35-00 |
| 13. | ಕದಂಬ (ಎಂ.ವಿ.ಸೀ. ಸಮಗ್ರ ಸಾಹಿತ್ಯ-1. ಸಮಗ್ರ ಸಂಶೋಧನ ಲೇಖನಗಳು) | 100-00 | 80-00 |
| 14. | ಕವಿರಾಜಮಾರ್ಗ (ಎಂ.ವಿ.ಸೀ. ಸಮಗ್ರ ಸಾಹಿತ್ಯ-2) | 100-00 | 80-00 |
| 15. | ಕವಿರಾಜಮಾರ್ಗ ವಿವಕ್ಷೆ (ಸಮಗ್ರ ಸಾಹಿತ್ಯ- 3 ಕವಿರಾಜಮಾರ್ಗವನ್ನು ಕುರಿತ ಲೇಖನಗಳು) | | |
| 16. | ಪದ್ಮಿನಿ ಕಲ್ಯಾಣ | | 15-00 |
| 17. | ಬೇಟೆರಾಯ ದೀಕ್ಷಿತರ ದೇವರನಾಮಗಳು ಮತ್ತು ಸಂಪ್ರದಾಯದ ಹಾಡುಗಳು | | 25-00 |

## ಸಿದ್ಧತೆಯಲ್ಲಿ

1. ತೌಲನಿಕ ಸಾಹಿತ್ಯ (ಅಚ್ಚಿನಲ್ಲಿ)
2. ತಿರುಕ್ಕುರಳ್ (ಕನ್ನಡಾನುವಾದ)